

# ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್

# ಜೀವನದ ಸುಸ್ಥಿರ ದೇಣಿಗೆ




ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯು ದಯಾಸಾಗರನಾಗಿದ್ದಾನೆ. ಕಷ್ಟದಲ್ಲಿದ್ದವರಿಗೆ, ದುಃಖದಲ್ಲಿರುವವರಿಗೆ ಆತ ಪರಿಹಾರದ ಆಶ್ರಯಸ್ಥಾನ. ನೋವು ನಷ್ಟಗಳಲ್ಲಿ ತಂಪನ್ನೆರೆಯುವ ದಿವ್ಯವಾದ ಅನುಪಮವಾದ, ಕರುಣೆ ಆತನದು.

ಶ್ರೀನಿವಾಸನ ದಿವ್ಯ ಕರುಣೆಯಿಂದ ಪ್ರೇರಿತವಾಗಿ ತಿರುಮಲ ತಿರುಪತಿ ದೇವಸ್ಥಾನಗಳು ದೀನರ, ಅಗತ್ಯವಿದ್ದವರ ನೋವು ದುಃಖಗಳನ್ನು ಪರಿಹರಿಸಲು ಹಲವಾರು ಆಸ್ಪತ್ರೆಗಳನ್ನು, ಧಾರ್ಮಿಕ ಸಂಸ್ಥೆಗಳನ್ನು ಏರ್ಪಡಿಸಿದೆ. ತಿ. ತಿ. ದೇವಸ್ಥಾನಗಳ ಪಾಲಿಗೆ ದೀನರ ದುಃಖ ದುಮ್ಮಾನಗಳ ಪರಿಹಾರವೇ ದಿವ್ಯವಾದ ಗಮ್ಯ; ಜಾತಿ, ಮತ, ಪಂಥಗಳಿಗೆ ಅತೀತವಾದ ಜೀವಂತ ಪರಂಪರೆಯಾಗಿದೆ. ತೀವ್ರತರವಾದ ಅನಾರೋಗ್ಯದಿಂದ ನರಳುವಂತಹ ದೀನ ದುಃಖಿಗಳಿಗೆ ತಕ್ಕ ಪರಿಹಾರ ನೀಡುವ ಚಿಕಿತ್ಸಾವಿಧಾನದ ಯೋಜನೆಯನ್ನು ತಿ. ತಿ. ದೇವಸ್ಥಾನಗಳು ಈಗ ಕೈಗೆತ್ತಿಕೊಂಡಿದೆ.

**ಧ್ಯೇಯೋದ್ದೇಶಗಳು :** ಭಾರತದ ಆಂಧ್ರಪ್ರದೇಶದಲ್ಲಿನ ತೀರ್ಥಕ್ಷೇತ್ರವಾದ ತಿರುಪತಿಯಲ್ಲಿ ನೋಂದಾಯಿತಗೊಂಡಿರುವ ತಿ. ತಿ. ದೇವಸ್ಥಾನಗಳ ಆಶ್ರಯದ ಒಂದು ಧಾರ್ಮಿಕ ಸಂಸ್ಥೆ ''ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್'' ಆಗಿದ್ದು ಬಡ ರೋಗಿಗಳಿಗೆ ನೆರವು ನೀಡುವ ಲಾಭರಹಿತ ಧಾರ್ಮಿಕ ಸಂಘಟನೆಯಾಗಿದೆ.

ಈ ಯೋಜನೆಯನ್ವಯ ಪ್ರಾಣಾಪಾಯವನ್ನುಂಟುಮಾಡುವ - ಹೃದಯ, ಮೂತ್ರಪಿಂಡ, ಮೆದುಳು ರೋಗಗಳೇ ಅಲ್ಲದೆ ಕ್ಯಾನ್ಸರ್ ಮೊದಲಾದ ತೀವ್ರತರ ಖಾಯಿಲೆಗಳಿಗೆ ಹೆಚ್ಚಿನ ಹಣ ಬಯಸುವ ಚಿಕಿತ್ಸಾ ವಿಧಾನಗಳನ್ನು ಭರಿಸಲು ಶಕ್ತಿಯಿಲ್ಲದ ಬಡವರಿಗೆ ನೆರವಿನ ಕೈನೀಡಿ ಸಹಾಯ ಮಾಡಲಾಗುವುದು. ತಿ. ತಿ. ದೇವಸ್ಥಾನಗಳ ಎಲ್ಲ ಆಸ್ಪತ್ರೆಗಳಲ್ಲಿಯೂ - ಸ್ವಿಮ್ಸ್, ಬರ್ಡ್, ರೂಯಾ, ಆಸ್ಪತ್ರೆಗಳು ಹಾಗೂ ಪ್ರಸೂತಿ ಆಸ್ಪತ್ರೆಗಳಲ್ಲಿ - ಬಡವರಿಗೆ ಜಾತಿ ಮತ ಪಂಥಗಳ ಭೇದವಿಲ್ಲದೆ ನೆರವಿನ ಹಸ್ತ ಚಾಚಿ ಚಿಕಿತ್ಸೆ ನೀಡಲಾಗುತ್ತದೆ.

ಮೂತ್ರಕೋಶ ವೈಫಲ್ಯ, ಹೆಮೋಫಿಲಿಯ, ತಲಸ್ಸೆಮಿಯ, ಕ್ಯಾನ್ಸರ್ ಮೊದಲಾದ ದೀರ್ಘಕಾಲಿಕ ರೋಗಗಳ ಬಗ್ಗೆ ಸಂಶೋಧನೆ, ಪರಿಹಾರೋಪಾಯ ಪ್ರಯತ್ನಗಳಿಗೂ ಈ ಯೋಜನೆಯನ್ವಯ ಅವಕಾಶವಿದೆ. ಬಡರೋಗಿಗಳಿಗೆ ಉಚಿತವಾಗಿ ರಕ್ತ, ಕೃತಕ ಅಂಗಾಂಗಗಳು, ಫಿಜಿಯೋಥೆರಪಿ, ಮೊದಲಾದ ಪ್ರಾಥಮಿಕ ಆರೋಗ್ಯ ಪರಿಕರಗಳು, ಪರಿಪೂರಕಗಳು ದೊರೆಯುವಂತೆ ಮಾಡುವುದೇ ತಿ. ತಿ. ದೇವಸ್ಥಾನಗಳು ರೂಪಿಸಿರುವ ವಿಶೇಷವಾದ ''ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಯ'' ಗುರಿ.

**ತಿ. ತಿ. ದೇ. ಸಹಯೋಗ :** ಈ ದತ್ತಿನಿಧಿಯ ಸ್ವಯಂ ಪೂರ್ಣವಾಗುವಂತೆ ಮಾಡಲು ತಿ. ತಿ. ದೇವಸ್ಥಾನಗಳು ಯೋಜನೆಗೆ ಬರುವ ದಾನಗಳಿಗೆ ತಕ್ಕ ಮೂಲಬಂಡವಾಳವನ್ನು ಬಿಡುಗಡೆ ಮಾಡಲು ಯೋಜಿಸಿದೆ.

**ದಾನಿಗಳಿಗೆ ದೊರೆಯುವ ಸೌಲಭ್ಯಗಳು :** ಈ ಯೋಜನೆಗೆ ಐದು ಲಕ್ಷ ರೂಪಾಯಿ ಹಾಗೂ ಅಧಿಕ ಮೊತ್ತದ ಧನವನ್ನು ನೀಡುವ ದಾನಿಗಳಿಗೆ ಕೆಳಕಂಡ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುವುದು.

1. ದಾನಿಯೂ ಸೇರಿದಂತೆ ಐವರಿಗೆ ವರ್ಷಕ್ಕೆ ಒಮ್ಮೆ ಮೂರು ದಿನಗಳು ವಿ.ಐ.ಪಿ. ದರ್ಶನವನ್ನು ವೈಕುಂಠದ ಸೆಲ್ಲಾರ್ ಮೂಲಕ ಅನುಮತಿಸಲಾಗುವುದು.

2. ದಾನಿಯ ಮೊದಲನೆಯ ದರ್ಶನ ಕಾಲದಲ್ಲಿ ಸ್ವಾಮಿ ಹಾಗೂ ಅಮ್ಮನವರ ಚಿನ್ನದ ಮುಲಾಮಿನ ರಜತ ಚಿತ್ರಗಳಿರುವ ಪ್ಲಾಕೆಯನ್ನು ನೀಡಲಾಗುವುದು.

3. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ಬಹೂಕರಿಸಲಾಗುವುದು.

4. ತಿರುಮಲೆಯ ಸಾಮಾನ್ಯ ಅತಿಥಿಗೃಹಗಳಲ್ಲಿ ವರ್ಷಕ್ಕೆ ಒಮ್ಮೆ ಒಟ್ಟಿಗೆ ಮೂರುದಿನ ಉಚಿತವಾಗಿ (ದೊರಕುವಂತಿದ್ದ ಪಕ್ಷದಲ್ಲಿ ಶುಲ್ಕ ಸಹಿತವಾದ ವಿ.ಐ.ಪಿ. ವಸತಿ) ವಸತಿಯನ್ನು ಒದಗಿಸಲಾಗುವುದು.

5. ವೈಯಕ್ತಿಕ ದಾನಿಗಳ ಜೀವಮಾನ ಪರ್ಯಂತವೂ, ಸಂಸ್ಥೆ, ಕಂಪನಿ, ಅವಿಭಕ್ತ ದಾನಿಗಳಿಗೆ 20 ವರ್ಷವೂ ಈ ಸೌಲಭ್ಯ ಉಂಟು.

ಆದಾಯತೆರಿಗೆ ವಿನಾಯತಿ ; 80 (ಜಿ) ಕಲಮಿನನ್ವಯ ದಾನಿಯು ಆದಾಯ ತೆರಿಗೆ ವಿನಾಯಿತಿ ಪಡೆಯಬಹುದು.

**ವಿನಂತಿ :** ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಗೆ ಉದಾರವಾಗಿ ವಂತಿಗೆಗಳನ್ನು ನೀಡಬೇಕೆಂದೂ ಆ ಮೂಲಕವಾಗಿ ಸಾವಿರಾರು ಹೃದಯ, ಮೂತ್ರಕೋಶ, ಮೆದುಳು ರೋಗಿಗಳಿಗೆ ನೆರವು ನೀಡಬೇಕೆಂದೂ ವಿನಂತಿಸಿಕೊಳ್ಳಲಾಗಿದೆ. ತಾವು ನೀಡುವ ಪ್ರತಿ ಕಾಣಿಕೆಯೂ ಪವಿತ್ರವಾಗಿ ಬಡವರಿಗೆ ಆಧಾರವಾಗಿ ಅವರು ಜೀವನವನ್ನು ಪರಿಪೂರ್ಣ ಆರೋಗ್ಯದಿಂದ ಕಳೆಯಲು ಅನುಕೂಲ ಮಾಡಿಕೊಡುತ್ತದೆ.

**ಮಾನವ ಸಮಾಜಕ್ಕೆ ಸೇವೆ ಸಲ್ಲಿಸುವುದರಿಂದ ದೇವರ ಸೇವೆಯನ್ನು ಸಲ್ಲಿಸಿರಿ**

ತಮ್ಮ ಎಲ್ಲ ದಾನಗಳೂ ಕಾರ್ಯನಿರ್ವಹಣಾಧಿಕಾರಿ ಶ್ರೀವೆಂಕಟೇಶ್ವರ ಪ್ರಾಣದಾನ ಟ್ರಸ್ಟ್ ತಿ.ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ರೂಪದಲ್ಲಿದ್ದು, ಅವುಗಳನ್ನು ಕಳುಹಿಸಬೇಕಾದ ವಿಳಾಸ - ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ಆಡಳಿತ ಭವನ. ಕೆ.ಟಿ. ರಸ್ತೆ, ತಿರುಪತಿ - 517 507.

**ದಾನಿಗಳಾಗಿರಿ - ದುಃಖಿಗಳಿಗೆ ಜೀವದಾನ ಮಾಡಿರಿ.**



ಶ್ರೀವನಿತೆಯರಸನೆ ವಿಮಲ ರಾ
ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಕರ ದಾತಾರ
ರಾವಣಾಸುರ ಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ

ಶ್ರೀ ಮದಮರಾಧೀಶ ನತಪದ
ತಾಮರಸ ಘನವಿಪುಳ ನಿರ್ಮಳ
ರಾಮನನುಪಮ ಮಹಿಮ ಸನ್ಮುನಿ ವಿನುತ ಜಗಭರಿತ
ಶ್ರೀ ಮದೂರ್ಜಿತ ಧಾಮ ಸುದಯಾ
ನಾಮನಾಹವ ಭೀಮ ರಘುಕುಲ
ರಾಮ ರಕ್ಷಿಸುವೊಲಿದು ಗದುಗಿನ ವೀರನಾರಯಣ

– ಕುಮಾರವ್ಯಾಸ.

ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 29-11-2002 ರಿಂದ 8-12-2002

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 29-11-2002 | ಶುಕ್ರವಾರ | | ಅಂಕುರಾರ್ಪಣೆ. |
| 30-11-2002 | ಶನಿವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 1-12-2002 | ಭಾನುವಾರ | ದೊಡ್ಡ ಶೇಷ ವಾಹನ | ಹಂಸವಾಹನ. |
| 2-12-2002 | ಸೋಮವಾರ | ಮುತ್ತಿನ ಚಪ್ಪರವಾಹನ. | ಸಿಂಹವಾಹನ |
| 3-12-2002 | ಮಂಗಳವಾರ | ಕಲ್ಪವೃಕ್ಷವಾಹನ | ಹನುಮಂತವಾಹನ |
| 4-12-2002 | ಬುಧವಾರ | ಪಲ್ಲಕ್ಕಿ ಉತ್ಸವ | |
| | | ಸಂಜೆ - ವಸಂತೋತ್ಸವ | **ಗಜವಾಹನ.** |
| 5-12-2002 | ಗುರುವಾರ | ಸರ್ವಭೂಪಾಲವಾಹನ. | **ಗರುಡವಾಹನ.** |
| 6-12-2002 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 7-12-2002 | ಶನಿವಾರ | **ರಥೋತ್ಸವ** | ಅಶ್ವವಾಹನ. |
| 8-12-2002 | ಭಾನುವಾರ | **ಚಕ್ರಸ್ನಾನ.** | ಧ್ವಜಾವರೋಹಣ. |

**ಸೂಚನೆ :** ತಿರುಚಾನೂರಿಗೆ ಪ್ರತಿ ಐದು ನಿಮಿಷಕ್ಕೆ ಒಂದರಂತೆ ತಿರುಪತಿಯಿಂದ ಬಸ್‌ಗಳಿವೆ. ಉತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಹೆಚ್ಚಿನ ವಿವರಗಳಿಗೆ ತಮ್ಮ ಬಳಿಯ ತಿ.ತಿ.ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ

ಸಂಪುಟ - 33 ಡಿಸೆಂಬರ್ 2002 ಸಂಚಿಕೆ - 7

## ಕಾರ್ತೀಕ - ಮಾರ್ಗಶಿರ ಸಂಚಿಕೆ

### ವಿಷಯಸೂಚಿ



ಮುಖಚಿತ್ರ : ಗೋದಾದೇವಿ ಅಲಂಕಾರದಲ್ಲಿ ಶ್ರೀ ಪದ್ಮಾವತೀದೇವಿ.

ಹಿಂಬದಿಯಲ್ಲಿ : ಶ್ರೀನಿವಾಸ ಕಲ್ಯಾಣ - ಚಿತ್ರ - ಶಿವಪ್ರಸಾದ್.

WWW.Tirumala.Com ವಿಳಾಸದಿಂದ ಇಂಟರ್‌ನೆಟ್‌ನಲ್ಲಿ ತಿ.ತಿ.ದೇ.ಗಳ ಬಗ್ಗೆ ವಿವರಗಳನ್ನು ಪಡೆಯಬಹುದು.



ಲೇಖನ/ಜಾಹೀರಾತುಗಳಿಗೆ ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**



ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ||

# ನಿಮ್ಮೊಡನೆ ಎರಡು ಮಾತು......



ಪರಿಶುದ್ಧತೆ, ಪರಿಶುಭ್ರತೆ - ಎಂಬುವು ಭಾರತೀಯರಾದ ನಮಗೆ ಅನಾದಿಯಿಂದ ಬಂದ ಆಚಾರವಾಗಿದೆ. ಪರಿಶುಭ್ರತೆ ಎಲ್ಲಿರುವುದೋ ಅಲ್ಲಿ ಪರಮಾತ್ಮನಿರುತ್ತಾನೆ - ಎಂಬುದು ನಮ್ಮ ನಂಬಿಕೆ. ಎಂತಲೇ ಆಚಾರಗಳನ್ನು ಅನುಸರಿಸುವಾಗ ಮನಃಶುದ್ಧಿ ಬೇಕೆಂದರು ಹಿರಿಯರು. ಶುದ್ಧವಾಗಿರುವುದರಿಂದ ಮನಕ್ಕೆ ಶಾಂತಿ ದೇಹಕ್ಕೆ ಆರೋಗ್ಯ.

ವ್ಯಕ್ತಿ ಶುಭ್ರವಾಗಿದ್ದರೆ ಮನೆ ಶುದ್ಧವಾಗಿರುತ್ತದೆ. ಮನೆಗಳು ಶುದ್ಧವಾಗಿದ್ದರೆ ಗ್ರಾಮ, ಗ್ರಾಮಗಳು ಶುದ್ಧವಿದ್ದಲ್ಲಿ ದೇಶ. ಆರೋಗ್ಯಕರವಾದ ವಾತಾವರಣದಲ್ಲಿ ದೇಶದ ಬಾವುಟ ಗಗನತಲದಲ್ಲಿ ಗರ್ವದಿಂದ ಹಾರಾಡಲು ಸಾಧ್ಯವಾಗುತ್ತದೆ. ಹಾಗೆಂದೇ ಪ್ರತಿ ತಿಂಗಳ ಮೂರನೆಯ ಶನಿವಾರವನ್ನು ಪರಿಶುದ್ಧತೆಗೆಂದು ಮೀಸಲಿರಿಸಿದೆ ಆಂಧ್ರಪ್ರದೇಶದ ರಾಜ್ಯಸರ್ಕಾರ. ನಾವು ಆಚರಿಸಿ ನಡೆದರೆ ಪಕ್ಕದಲ್ಲಿರುವವರೂ ಆಚರಿಸಲು ಪೂರಕವಾಗುತ್ತದೆ. ಪಕ್ಕದ ರಾಜ್ಯದಿಂದ ಸ್ಫೂರ್ತಿಯನ್ನು ಪಡೆದರೂ ಸಂತಸವೇ. ಇದೇ ಕಾಲಕ್ರಮದಲ್ಲಿ ಸಂಸ್ಕೃತಿಯಾಗಿ ಪರಂಪರೆಯಾಗಿ ಮೆರೆಯುತ್ತದೆ.

ತಿರುಮಲೆ ಸಾಕ್ಷಾತ್ ವೈಕುಂಠ, ಮನುಷ್ಯನಿಗೆ ಒಳಿತಾಗಲೆಂದು ಶ್ರೀಮನ್ನಾರಾಯಣನು ವೆಂಕಟೇಶ್ವರಸ್ವಾಮಿಯಾಗಿ ನೆಲೆಸಿದ ಸ್ಥಳ. ಅತಿ ಪವಿತ್ರವಾದ ಪುಣ್ಯಕ್ಷೇತ್ರವಿದು. ಸರ್ವದೇವತೆಗಳೂ ಇಲ್ಲಿ ಸನ್ನಿಹಿತರಾಗಿರುವರೆಂದೂ, ಇಲ್ಲಿನ ಕಲ್ಲು, ಗುಂಡು, ಹಾದಿ, ಮಣ್ಣು, ತರುಗಿಡ ಬಳ್ಳಿಗಳೆಲ್ಲ ಪವಿತ್ರವೆಂದೂ ಆಧ್ಯಾತ್ಮವಿದರೂ, ಪುರಾಣ, ಇತಿಹಾಸಗಳೂ, ಪದೇ ಪದೇ ಹೇಳುತ್ತ ಬಂದಿರುವುದು ಸ್ಪಷ್ಟವೇ ಆಗಿದೆ.

ಇಂತಹ ಪವಿತ್ರ ಪುಣ್ಯಕ್ಷೇತ್ರವಾದ ತಿರುಮಲೆ ಕ್ಷೇತ್ರವನ್ನು ಎಷ್ಟು ಪರಿಶುದ್ಧವಾಗಿ ಪರಿಶುಭ್ರವಾಗಿ ಇಟ್ಟುಕೊಳ್ಳಬೇಕು ಎಂಬುದನ್ನು ಯೋಚಿಸಬೇಕು. ದೇವಾದಿದೇವನಾದ ಶ್ರೀನಿವಾಸನ ಬೆಟ್ಟದಲ್ಲಿ ಆಚಾರಗಳಿಗೆ ವಿರುದ್ಧವಾಗಿ ವರ್ತಿಸುವುದು ಪರಿಸರವನ್ನು ಮಲಿನಗೊಳಿಸುವುದು ಎಂತಹ ಪಾಪದ ಕೆಲಸ ಎಂಬುದನ್ನು ಆಲೋಚಿಸಬೇಕು. ಯಾಂತ್ರಿಕ ಜೀವನದ ಅಷ್ಟಕಷ್ಟಗಳಿಗೆ ಸಿಕ್ಕಿ, ಸ್ವಲ್ಪ ಸಮಯವಾದರೂ ಚಿತ್ತಶಾಂತಿಯನ್ನು ಬಯಸಿ ಬೆಟ್ಟಕ್ಕೆ ಬರುವ ಸನ್ನಿವೇಶದಲ್ಲಿ, ಆ ಸ್ವಲ್ಪ ಹೊತ್ತಾದರೂ ಬಲಹೀನತೆಗಳಿಗೆ ತಾವು ಕೊಡದೆ ಪ್ರಶಾಂತವಾಗಿ ಕಳೆಯದಿದ್ದರೆ ಹೇಗೆ? ಧೂಮಪಾನ, ಮದ್ಯ, ಮಾಂಸಗಳೇ ಮೊದಲಾದವು ತಿರುಮಲೆಯಲ್ಲಿ ನಿಷಿದ್ಧ. ಅಷ್ಟೇ ಅಲ್ಲ ಸದಾಚಾರಕ್ಕೆ ವಿರುದ್ಧವಾದ ಯಾವ ಕೆಲಸವನ್ನೂ ತಿರುಮಲೆಯಲ್ಲಿ ಮಾಡಬಾರದು. ಕೊನೆಗೆ ದಾರಿಯಲ್ಲಿ ಉಗುಳುವುದೂ ಸಹ ಕ್ಷೇಮಕರವಲ್ಲ. ಅದೂ ಪಾಪಕಾರ್ಯವೇ ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು.

ಭಾರತ ದೇಶಕ್ಕೆ ಮುಕುಟಪ್ರಾಯವಾದ ತಿರುಮಲೆಯನ್ನು ಎಷ್ಟು ಶುದ್ಧವಾಗಿಟ್ಟುಕೊಂಡರೆ ಅಷ್ಟು ಗರ್ವಕಾರಣ. ಪುಣ್ಯದ ಕೆಲಸ. ಅದು ಆ ದೇವದೇವರಿಗೆ ನಾವು ಸಲ್ಲಿಸುವ ಕನಿಷ್ಠ ಸೇವೆ.

ತಿರುಮಲೆಯನ್ನು ಹಸಿರಾಗಿ, ಪರಿಶುಭ್ರವಾಗಿ ನೋಡಿಕೊಳ್ಳಲು ತಿ. ತಿ. ದೇವಸ್ಥಾನಗಳು ಅಕುಂಠಿತವಾಗಿ ಕೆಲಸಮಾಡುತ್ತದೆ. ಸಾಧಾರಣ ದಿನಗಳಲ್ಲಿಯೇ ಸಾವಿರ ಸಾವಿರ ಮಂದಿ ಬರುವ ಕ್ಷೇತ್ರದಲ್ಲಿ ಉಗುಳು ಕೂಡ ಗುಡ್ಡವಾಗುವುದು. ಅದರಲ್ಲಿಯೂ ಪರ್ವದಿನಗಳಲ್ಲಿ ಲಕ್ಷ ಸಂಖ್ಯೆಯ ಭಕ್ತರು ಬರುವಾಗ ಏನಾಗುವುದೆಂಬುದನ್ನು ಕಲ್ಪಿಸಿಕೊಂಡು ಪರಿಶುಭ್ರತೆಯನ್ನು ಖಚಿತವಾಗಿ ಪರಿಪಾಲಿಸಬೇಕಾಗುತ್ತದೆ. ಇದಕ್ಕೆ ದೇವಸ್ಥಾನಗಳ ಪ್ರಯತ್ನ ಮಾತ್ರವೇ ಸಾಲದು. ಭಕ್ತರೂ ಸಹಕರಿಸಬೇಕಾದದ್ದು ಅನಿವಾರ್ಯ. ತಿರುಮಲೆಯ ಆಲಯದಲ್ಲಿ ಮಾತ್ರವೇ ಅಲ್ಲ, ಎಲ್ಲ ಕಡೆಯಲ್ಲಿಯೂ ಸ್ವಾಮಿಯ ಸನ್ನಿಧಿಯಿದೆ ಎಂದು ತಿಳಿದು ಸರ್ವತ್ರ ಪರಿಶುಭ್ರತೆಯನ್ನು ಪಾಲಿಸಬೇಕು. ಆಗಲೇ ನಾವು ಗಮ್ಯವನ್ನು ಕುರಿತು ಪಯಣಿಸುವವರಾಗುತ್ತೇವೆ.

ಈ ಕ್ಷಣದಿಂದಲೇ ಪರಿಶುಭ್ರತೆಯ ಪವಿತ್ರ ಪುಣ್ಯಕಾರ್ಯದಲ್ಲಿ ಕೈಂಕರ್ಯದಲ್ಲಿ ತೊಡಗಿಸಿಕೊಂಡು ಪ್ರವೃತ್ತರಾಗೋಣ.

"ಶುಭಂ ಭೂಯಾತ್"

ತಮ್ಮ ವಿಶ್ವಾಸಿ,

**ಡಾ॥ ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.



# ಶ್ರೀ ಯಾಮುನರ - ಗೀತಾರ್ಥ ಸಂಗ್ರಹ


- ಕಂದಾಡೈ ಕೇಶವನ್.




ಪ್ರಸ್ಥಾನತ್ರಯದಲ್ಲಿ ಬಂದಾಗ ಭಗವದ್ಗೀತೆ ಸನಾತನ ಧರ್ಮ ಗ್ರಂಥ, ಸರ್ವಕಾಲಕ್ಕೂ ಜಗತ್ತಿಗೆಲ್ಲಾ ಮಾನವ ಸಹಜ ಧರ್ಮಗಳನ್ನು ಆಚಾರಗಳನ್ನು ತಿಳಿಸುವ ಏಕೈಕ ಜೀವನ ಧರ್ಮಶಾಸ್ತ್ರ. ವಿಶ್ವಕ್ಕೆ ಆದರಣೀಯವಾದ ಜ್ಞಾನೋಪದೇಶದ ವಿಶಿಷ್ಟ ಭಂಡಾರದ ವಿಶ್ವಕೋಶ. ಸ್ವತಃ ಪರಮಾತ್ಮನ ಮುಖಾರವಿಂದದಿಂದ ಬಂದ ಅಮೃತವಾಣಿ. ಕರ್ಮಜ್ಞಾನ ಭಕ್ತಿಗಳ ಸಂಗಮದ ತೀರ್ಥರಾಜ. ಯುಗಯುಗಗಳಿಂದ ಸಂತರು, ವಿದ್ವಾಂಸರು ಸಾಧಕರು, ಮುಮುಕ್ಷುಗಳು ಈ ಪುಣ್ಯ ಗಂಗೆಯಲ್ಲಿ ಮಿಂದು ಗೋವಿಂದನ ವಾಣಿ ಯಿಂದ ಪುನೀತರಾಗಿದ್ದಾರೆ. ಶ್ರೀರಾಮಾನುಜರ ಗುರುಗಳು, ವಿಶಿಷ್ಟಾದ್ವೈತಮತಕ್ಕೆ ಮಾರ್ಗ ದರ್ಶನವಿತ್ತ ಪರಮಾಚಾರ್ಯ ಯಾಮುನರ ಗೀತಾರ್ಥ ಸಂಗ್ರಹ 32 ಶ್ಲೋಕಗಳಲ್ಲಿ ಗೀತೆಯ ತಿರುಳನ್ನು ತಿಳಿಸುವ ತಿರುವಾಯ್‌ಮೊಳಿ, ಸಿರುನುಡಿ. ''ಗೀತಾ ಗಂಗೋದಕಂ ಪೀತ್ವಾ ಪುನರ್ಜನ್ಮನವಿದ್ಯತೇ'' - ಸರ್ವಕಾಲಕ್ಕೂ ಸತ್ಯ. ಉಪನಿಷತ್‌ಗಳ ಸಾರವಿದು. ಭಗವದ್ ರಾಮಾನುಜರು ಯಾಮುನರ ಆಸೆಯಂತೆ ಭಗವದ್ಗೀತೆಗೆ ಭಾಷ್ಯವನ್ನು ಬರೆಯಲು ಸ್ಫೂರ್ತಿ ನೀಡಿದ್ದು ಇವರ ಗೀತಾರ್ಥ ಸಂಗ್ರಹ. ಅವರ ದಾಟಿಯಲ್ಲೇ ಅವರ ನಾಡಿಯನ್ನೇ ಹಿಡಿದು ಅವರ ದೃಷ್ಟಿಕೋನದಲ್ಲೇ ಅವರ ಭಾವಕ್ಕೆ ವಿವೇಚನೆಗಳಿಗೆ ಪುಷ್ಟಿಕೊಟ್ಟು ತಮ್ಮ ವ್ಯಾಖ್ಯಾನವನ್ನು ರಚಿಸಿದ್ದರಿಂದಲೇ ರಾಮಾನುಜರ ಗೀತಾ ಭಾಷ್ಯ ಜಗತ್ ಪ್ರಸಿದ್ಧಿಯನ್ನು ಪಡೆಯಿತು. ಗೀತಾಚಾರ್ಯನು ಜಗದ್ಗುರುವಾದ. ಅವನ ಧರ್ಮ ವಿಶ್ವ ಧರ್ಮವಾಯಿತು. ಯಜ್ಞವಾಯಿತು. ಗೀತಾಯಜ್ಞದಲ್ಲಿತೊಡಗಿಸಿಕೊಂಡವರು ಪವಿತ್ರ ಆಧ್ಯಾತ್ಮಿಕ ಜ್ಞಾನವನ್ನು ಪಡೆದು ನಿಷ್ಠೆಯಿಂದ ಜೀವನವನ್ನು ಸಾಗಿಸುವ ಸೌಲಭ್ಯ ಪಡೆದರು. ಗೀತೆಯ ವಿಚಾರವು ಎಲ್ಲರ ಆಚಾರವಾಗಿ ಆಚಾರದ ಸಂಹಿತೆಯಾಗಿ ಭಾವಕ್ಕೆ ಸೀಮಾತೀತವಾಗಿ ಅನುಭವಕ್ಕೆ ವಿಭೂತಿಯಾಗಿ ಮತಿಗೆ ಜ್ಯೋತಿಯಾಗಿ ಪುರುಷಾರ್ಥಕ್ಕೆ ಸಾಧನವಾಗಿ, ಚಿತ್ತಕ್ಕೆ ಶಾಂತಿಯ ಸರ್ವಾಂಗೀಣ ಸಂಸ್ಕಾರದ ಶಶಿಯಾಗಿ ಎಲ್ಲಾ ಕಾಲಕ್ಕೂ ನಿಂತ ನವನವೀನ ನಾಣ್ಯವಾಗಿದೆ.

### ಗೀತಾರ್ಥ ಸಂಗ್ರಹ ರಚನೆ

ಶ್ರೀ ಯಾಮುನರು ಗೀತಾರ್ಥ ಸಂಗ್ರಹ ಮೊದಲನೆಯ ಶ್ಲೋಕದಲ್ಲಿ ಭಗವದ್ಗೀತೆಯ 18 ಅಧ್ಯಾಯಗಳ ಸಾರಾರ್ಥವನ್ನು ಹೀಗೆಂದು ತಿಳಿಸಿದ್ದಾರೆ.

ಸ್ವಧರ್ಮಜ್ಞಾನ ವೈರಾಗ್ಯ
ಸಾಧ್ಯ ಭಕ್ತ್ಯೈಕ ಗೋಚರಃ
ನಾರಾಯಣಃ ಪರಂಬ್ರಹ್ಮ
ಗೀತಾ ಶಾಸ್ತ್ರೇ ಸಮೀರಿತಃ

ನಾರಾಯಣನೇ ಪರಬ್ರಹ್ಮನೆಂದು ಗೀತಾ ಶಾಸ್ತ್ರದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಸ್ವಧರ್ಮಾನುಷ್ಠಾನಾದಿ ಕರ್ಮಯೋಗ. ಪರಮಾತ್ಮನಿಗೆ ನಾನು ಶೇಷಭೂತನು ಎಂಬುವ ಜ್ಞಾನದ ಅರಿವು. ವೈರಾಗ್ಯವೆಂದರೆ ಭಗವಂತನಿಗಿಂತ ಬೇರೆ ಎಲ್ಲಾ ವಿಷಯಗಳಲ್ಲಿ ಆಸೆ ಯಿಲ್ಲದಿರುವುದು. ಸಾಧ್ಯ ಭಕ್ತ್ಯೈಕಗೋಚರಃ ಎಂದರೆ ಭಕ್ತಿಗೆ ಮಾತ್ರ ಗೋಚರನಾಗುವನು ಆ ಅಗೋಚರನಾದ ಗೋವಿಂದನು. ಗೀತೆಯ ಮಾರ್ಗದಲ್ಲಿ ಸುಲಭ ಗ್ರಾಹ್ಯ. ವೈರಾಗ್ಯವೆಂದರೆ ಪರಮಾತ್ಮನಿಯೋರಕ್ತೋ ಕರ್ಮಯೋಗಕ್ಕೆ ವೈರಾಗ್ಯವೇ ಮೂಲ. ಭಕ್ತಿ ಧ್ಯೇಯೋ ನಾರಾಯಣ ಸ್ಸದಾ. ಪರಮಾತ್ಮನೇ ಪರಮ ಭೋಗ್ಯನಾದವನು.

2ನೇ ಶ್ಲೋಕ ಮೊದಲನೆಯ ಗೀತೆಯ ಷಟ್ಕ -

ಜ್ಞಾನ ಕರ್ಮಾತ್ಮಿಕೇ ನಿಷ್ಠೇ
ಯೋಗ ಲಕ್ಷ್ಯೇ ಸುಸಂಸ್ಕೃತೇ
ಆತ್ಮಾನುಭೂತಿ ಸಿದ್ಧ್ಯರ್ಥೇ
ಪೂರ್ವ ಷಟ್ಕೇನ ಚೋದಿತೇ

ಈ ಶ್ಲೋಕದಲ್ಲಿ 1ನೇ ಅಧ್ಯಾಯದಿಂದ 6ನೇ ಅಧ್ಯಾಯಗಳ ಸಾರಾರ್ಥ, ಜ್ಞಾನಯೋಗ ಕರ್ಮಯೋಗ ಉಪದೇಶದಿಂದ ಸ್ಥಿತಪ್ರಜ್ಞತೆ. ಅದರ ಲಾಭ, ಆತ್ಮಸಾಕ್ಷಾತ್ಕಾರ. ಶ್ರೀ ಭಗವದ್ಗೀತೆಯ 18 ಅಧ್ಯಾಯಗಳನ್ನು ಆರು ಆರು ಅಧ್ಯಾಯಗಳಾಗಿ ವಿಭಾಗಮಾಡಿ ಮೂರು ಷಟ್ಕಗಳಾಗಿ ವಿಂಗಡಿಸಿ ಮೊದಲನೆಯ ಷಟ್ಕದ ಅರ್ಥ ಹೇಳಿ. ಮುಂದಿನ 3ನೇ ಶ್ಲೋಕ ಎರಡನೆಯ ಷಟ್ಕದಲ್ಲಿ ಭಕ್ತಿಯೋಗವನ್ನು ವಿವರಿಸುವಾಗ -

ಮಧ್ಯಮೇ ಭಗವತ್ ತತ್ತ್ವ
ಯಥಾತ್ಮ್ಯಾವಾಪ್ತಿ ಸಿದ್ಧಯೇ
ಜ್ಞಾನ ಕರ್ಮಾಭಿ ನಿರ್ವರ್ತ್ಯೋ
ಭಕ್ತಿ ಯೋಗಃ ಪ್ರಕೀರ್ತಿತಃ

ಗೀತೆಯ 7ರಿಂದ 12 ವರೆಗಿನ ಆರು ಅಧ್ಯಾಯಗಳು ಭಗವಂತನ ಪರತತ್ತ್ವ. ಅವನ ಕಲ್ಯಾಣ ಗುಣಗಳು. ಭಗ ಶಬ್ಧದ ಅರ್ಥವನ್ನು ವಿವರಿಸಿ ಭಗವಂತನ ಅನುಭವ ಪಡೆಯಲು ಜ್ಞಾನಯೋಗ ಕರ್ಮಯೋಗಗಳು ಪೂರಕವು ಎಂದು ತಿಳಿಸಿ-

ಐಶ್ವರ್ಯಸ್ಯ ಸಮಗ್ರಸ್ಯ
ವೀರ್ಯಸ್ಯ ಯಶಸ ಶ್ರಿಯಃ
ಜ್ಞಾನ ವೈರಾಗ್ಯ ಯೋ ಶ್ಚೈವ
ಷಣ್ಣಾಂ ಭಗ ಇತೀರಣಾ

ಭಗ ಶಬ್ಧದ ನಿರ್ವಚನದಲ್ಲಿ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ ವೈರಾಗ್ಯ ಯಶಃ ಶ್ರೀ ಎಂಬುದನ್ನುಸಂಪೂರ್ಣವಾಗಿ ಉಳ್ಳ ಪರಬ್ರಹ್ಮನು ಸರ್ವಕಾರಣ ಕಾರಣನಾದ ಶುದ್ಧ ಮಹಾವಿಭೂತಿ. ಅವನಲ್ಲಿ ಭಕ್ತಿ ವಿವರಣೆ ನಾಲ್ಕನೇ ಶ್ಲೋಕ -



ಪ್ರಧಾನ ಪುರುಷ ವ್ಯಕ್ತ
ಸರ್ವೇಶ್ವರ ವಿವೇಚನಂ
ಕರ್ಮಧೀ ಭಕ್ತಿ ರಿತ್ಯಾದಿಃ
ಪೂರ್ವ ಶೇಷೋऽತಿ ಮೋದಿತಃ

ಕೊನೆಯ ಷಟ್ಕದ 13 ರಿಂದ 18 ಅಧ್ಯಾಯಗಳ ಸಾರಾಂಶ ಚಿತ್ತು, ಅಚಿತ್ತು, ಪರಮಾತ್ಮ - ಇವರುಗಳ ಸ್ವರೂಪಗಳು ಹಿಂದಿನ ಕರ್ಮ, ಜ್ಞಾನ, ಭಕ್ತಿ ಯೋಗಗಳ ಪುನರ್ ವಿವೇಚನೆ ವಿವರಣೆ - ಇತ್ಯಾದಿ.

ಅಸ್ಥಾನ ಸ್ನೇಹ ಕಾರುಣ್ಯ
ಧರ್ಮಾಧರ್ಮಧಿಯಾಕುಲಂ
ಪಾರ್ಥಂ ಪ್ರಪನ್ನಮುದ್ದಿಶ್ಯ
ಶಾಸ್ತ್ರಾವತರಣಂ ಕೃತಂ

- ಈ ಶ್ಲೋಕದಲ್ಲಿ ಭಗವದ್ಗೀತೆಯ ಒಂದನೆಯ ಅಧ್ಯಾಯ ಮತ್ತು ಎರಡನೆಯ ಅಧ್ಯಾಯದ ಮೊದಲ ಹತ್ತು ಶ್ಲೋಕಗಳ ಸಾರಾರ್ಥ ಇದೆ. ಸ್ನೇಹ ಕಾರುಣ್ಯ ಯೋಗ್ಯ ಸ್ಥಾನವಲ್ಲದ ಕಡೆಯಲ್ಲಿ ಅರ್ಜುನನು ತೋರಿಸಿದ ಕಾರಣ, ಧರ್ಮಾಧರ್ಮ ಅರಿಯದ ಅರ್ಜುನನಿಗೆ ಶರಣಾಗತನಾದವನನ್ನು ರಕ್ಷಿಸಲು ಪರಮಾತ್ಮನಾದ ಶ್ರೀಕೃಷ್ಣನು ಗೀತಾ ಶಾಸ್ತ್ರವನ್ನು ಉಪದೇಶಮಾಡಿದನು. ಪಾರ್ಥಂ ಪ್ರಪನ್ನಂ ಉದ್ದಿಶ್ಯ. ಗೀತೆಯ ಎರಡನೆಯ ಅಧ್ಯಾಯದಲ್ಲಿ ಅರ್ಜುನನು-

ಕಾರ್ಪಣ್ಯ ದೋಷೋಪಹತ ಸ್ವಭಾವಃ
ಪೃಚ್ಛಾಮಿತ್ವಾಂ ಧರ್ಮ ಸಂಮೂಢ ಚೇತಾಃ
ಯ ಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇऽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ

ನಾನು ನಿನ್ನ ಶಿಷ್ಯನು, ನಿನಗೆ ಶರಣ ನಾಗಿದ್ದೇನೆ. ನನಗೆ ಯಾವ ಧರ್ಮವು ಹಿತವೋ ಅದನ್ನು ಬೋಧಿಸು ಎಂಬುದು ಅರ್ಜುನನ ಬೇಡಿಕೆ.

ಆರನೆಯ ಶ್ಲೋಕ ಹೀಗೆ ಸಾಗುತ್ತದೆ-

ನಿತ್ಯಾತ್ಮಾ ಸಂಗ ಕರ್ಮೇಹ
ಗೋಚರಾ ಸಾಂಖ್ಯ ಯೋಗಧೀಃ
ದ್ವಿತಿಯೇ ಸ್ಥಿತ ಧೀರ್ಲಕ್ಷಾ
ಪ್ರೋಕ್ತಾ ತನ್ಮೋಹ ಶಾಂತಯೇ

ಆತ್ಮನು ನಿತ್ಯನು ದೇಹವು ನಶ್ವರ ಎಂಬುವ ಸಾಂಖ್ಯ ಯೋಗದ ವಿವರಣೆ - ಯೋಗದ ವಿವರಣೆ. ಸ್ಥಿತಪ್ರಜ್ಞನ ಲಕ್ಷಣ ಫಲಾಸಕ್ತಿಯಿಲ್ಲದೇ ಕರ್ಮ ಮಾಡುವ ಕಲೆಯನ್ನು ಇಲ್ಲಿ ವಿವರಿಸುತ್ತಾನೆ. ಕರ್ಮ ಫಲದಲ್ಲಿ ಆಸಕ್ತಿ ಇಲ್ಲದೆ ಕರ್ಮ ಬಂಧನಗಳಿಂದ ವಿಮುಕ್ತಿ ಮೋಕ್ಷಪ್ರಾಪ್ತಿ.

ಅಸಕ್ತ್ಯಾಲೋಕ ರಕ್ಷಾಯೈ
ಗುಣೇಷ್ವಾರೋಪ್ಯಕರ್ತೃತಾಂ
ಸರ್ವೇಶ್ವರೇ ವಾ ನ್ಯಸ್ಯೋಕ್ತಾ
ತೃತೀಯೇ ಕರ್ಮಕಾರ್ಯತಾ

ಮೂರನೆಯ ಅಧ್ಯಾಯದ ಸಾರಾರ್ಥ. ಅನಾಸಕ್ತಿಯಿಂದ ಕರ್ಮ ಆಚರಣೆ. ಲೋಕ ಕ್ಷೇಮಕ್ಕಾಗಿ ಮಾತ್ರ ತಾನು ಕರ್ಮಮಾಡುತ್ತಿರುವ ಎಂಬುವ ನಿರ್ಮಮಕಾರದ ಭಾವ. ಕರ್ಮಗಳ ಕರ್ತೃತ್ವವು ಸರ್ವೇಶ್ವರನಾದ ಪರಮಾತ್ಮನಿಗೆ ಸೇರಿದ್ದು, ತನಗಲ್ಲ - ಎಂಬುವ ದೃಢಭಾವನೆಯ ಕರ್ಮ. ಮೂರನೆಯ ಅಧ್ಯಾಯ 20 ರಿಂದ 26 ಸಾರಾಂಶ.

ಮಯಿ ಸರ್ವಾಣಿ ಕರ್ಮಾಣಿ
ಸಂನ್ಯಸ್ಯಾಧ್ಯಾತ್ಮ ಚೇತಸಾ
ನಿರಾಶೀ ರ್ನಿರ್ಮಮೋ ಭೂತ್ವಾ
ಯುದ್ಧ್ಯಸ್ವ ವಿಗತ ಜ್ವರಃ

- ಎಂಬುವ ಕೃಷ್ಣನ ಸಂದೇಶ.

ಪ್ರಸಂಗಾತ್ ಸ್ವಸ್ವಭಾವೋಕ್ತಿಃ
ಕರ್ಮಣೋರ್ ಅಕರ್ಮತಾಸ್ಯ ಚ
ಭೇದಾಃ ಜ್ಞಾನಸ್ಯ ಮಾಹಾತ್ಮ್ಯಂ
ಚತುರ್ಥಾಧ್ಯಾಯ ಉಚ್ಯತೇ

ಭಗವದ್ಗೀತೆಯ 4ನೇ ಅಧ್ಯಾಯದ ಸಾರಾರ್ಥ ಪ್ರಾಚೀನವಾದ ಕರ್ಮಯೋಗದ ವೈಶಿಷ್ಟ್ಯ. ಪರಮಾತ್ಮನ ಅವತಾರ ವಿಶೇಷಗಳು, ಕರ್ಮದಲ್ಲಿ ಅಡಗಿರುವ ಜ್ಞಾನಾಂಶ. ಕರ್ಮ ಅಕರ್ಮಗಳ ಭೇದ, ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆ - ಪರಮಾತ್ಮನ ಅವತಾರ ವಿಶೇಷ, ಅಜ್ಞಾನ ಹೋಗಲು ಜ್ಞಾನ ಅವಶ್ಯಕ.

ಐದನೇ ಅಧ್ಯಾಯ ಕರ್ಮ ಸನ್ಯಾಸ ಯೋಗದ ಸಾರಾಂಶ-

ಕರ್ಮ ಯೋಗಸ್ಯ ಸೌಕರ್ಯಂ
ಶೈಘ್ರ್ಯಂ ಕಾಶ್ಚನ ತದ್ವಿಧಾಃ
ಬ್ರಹ್ಮಜ್ಞಾನ ಪ್ರಕಾರಶ್ಚ
ಪಂಚಮಾಧ್ಯಾಯ ಉಚ್ಯತೇ

ಜ್ಞಾನಯೋಗ ಕರ್ಮಯೋಗಗಳಲ್ಲಿ ಯಾವುದು ಸುಲಭವೆಂದರೆ ಕರ್ಮಯೋಗ ಶೀಘ್ರಫಲವನ್ನು ಕೊಡುವ ಸುಲಭಮಾರ್ಗ. ಜಗತ್ತಿಗೆ ಕಾರಣನೂ ರಕ್ಷಕನೂ ಪರಬ್ರಹ್ಮನೆಂದು ಅರಿತು ಕರ್ಮಫಲಕ್ಕೆ ಅಂಟಿಕೊಳ್ಳದೇ ಆಚರಿಸಿದ ಕರ್ಮದಿಂದ ಯೋಗಿಯು - ಯೋಗಯುಕ್ತೋ ಮುನಿಃ ಬ್ರಹ್ಮ ನಚಿರೇಣಾದಿಗಚ್ಛತಿ - ಪರಬ್ರಹ್ಮನನ್ನು ಹೊಂದುತ್ತಾನೆ.

ಧ್ಯಾನಯೋಗದ ವಿಶ್ಲೇಷಣೆ-

ಯೋಗಾಭ್ಯಾಸ ವಿಧಿರ್ಯೋಗೀ
ಚತುರ್ಥಾ ಯೋಗ ಸಾಧನಂ
ಯೋಗಸಿದ್ಧಿ ಸ್ಸ್ವಯೋಗಸ್ಯ
ಪಾರಮ್ಯಂ ಷಷ್ಠ ಉಚ್ಯತೇ

ಭಗವದ್ಗೀತೆಯ ಆರನೆಯ ಅಧ್ಯಾಯದಲ್ಲಿ ತಿಳಿಸಿದ ಯೋಗಾಭ್ಯಾಸದ ವಿಧಿ ನಿಯಮಗಳು. ನಾಲ್ಕು ಬಗೆಯ ಯೋಗಿಗಳು, ಧ್ಯಾನಕ್ಕೆ ಬೇಕಾದ ವೈರಾಗ್ಯಾದಿ ಸಾಧನಗಳ ವಿವರ. ಆತ್ಮ ಚಿಂತನರೂಪ ಯೋಗಸಿದ್ಧಿ. ಯೋಗ ಭಕ್ತಿಯಿಂದ ಪರಮಾತ್ಮನ ಸಾಕ್ಷಾತ್ಕಾರ ವಿಷಯ ಸಮಚಿತ್ತ. ಸುಖದುಃಖಗಳಿಂದ ದೂರನಾಗಿ ವೈರಾಗ್ಯದಿಂದ ಭಗವಂತನ ಚಿಂತನೆ ಸುಲಭಮಾರ್ಗವೆಂಬ ವಿವರಣೆ. ಆತ್ಮ ಚಿಂತನ ರೂಪಧ್ಯಾನಕ್ಕಿಂತ ಪರಮಾತ್ಮನಲ್ಲಿ ಭಕ್ತಿ ಚಿಂತನವೇ ಪರಮ ಶ್ರೇಷ್ಠವೆಂದು 6ನೇ ಅಧ್ಯಾಯದ 47ನೇ ಶ್ಲೋಕದ ಸಾರಾಂಶ-

ಯೋಗಿನಾಮಪಿ ಸರ್ವೇಷಾಂ
ಮದ್ಗತೇ ನಾಂತರಾತ್ಮನಾ
ಶ್ರದ್ಧಾವಾನ್ ಭಜತೇ ಯೋ ಮಾಂ
ಸ ಮೇ ಯುಕ್ತತಮೋ ಮತಃ

ಜ್ಞಾನ ವಿಜ್ಞಾನ ಯೋಗದ ಏಳನೆಯ ಅಧ್ಯಾಯದ ಸಾರಾರ್ಥ-

ಸ್ವಯಾಥಾತ್ಮ್ಯಂ ಪ್ರಕೃತ್ಯಾಸ್ಯ
ತಿರೋಧಿಃ ಶರಣಾಗತಿಃ
ಭಕ್ತಭೇದಃ ಪ್ರಬುದ್ಧಸ್ಯ
ಶ್ರೈಷ್ಠ್ಯಂ ಸಪ್ತಮ ಉಚ್ಯತೇ

ಪರಮಾತ್ಮನ ನಿಜಸ್ವರೂಪವು ಪ್ರಕೃತಿಯ ಮಾಯೆಯಿಂದ ತ್ರಿಗುಣಗಳಿಂದ ಕೂಡಿದ ಆ ಮಾಯೆಯನ್ನು ಪರಮಾತ್ಮನಲ್ಲಿ ಶರಣಾಗತಿ ಮಾಡಿದರೆ ಮಾಯೆಯನ್ನು ದಾಟಬಹುದು ಆರ್ಥಾರ್ಥಿ, ಜಿಜ್ಞಾಸು ಮತ್ತು ಜ್ಞಾನಿ ಭಗವದ್ಭಕ್ತರ ವಿವಿಧತೆ ವಿವರಣೆ.

ಅಕ್ಷರ ಬ್ರಹ್ಮಯೋಗ 8ನೇ ಅಧ್ಯಾಯ ಸಾರಾಂಶ -

ಐಶ್ವರ್ಯಾಕ್ಷರ ಯಾಥಾತ್ಮ್ಯ
ಭಗವಚ್ಚರಣಾರ್ಥಿನಾಂ
ವೇದ್ಯೋಪಾದೇಯ ಭಾವಾನಾಂ
ಅಷ್ಟಮೇ ಭೇದ ಉಚ್ಯತೇ

ಅಂತಹ ಭಕ್ತರು ಯಾವ ರೀತಿ ಭಗವಂತನನ್ನು ಆರಾಧನೆ ಮಾಡಬೇಕು. ಆಧಿಭೂತ, ಆಧಿದೈವ ಆಧಿಯಜ್ಞಗಳ ವಿಚಾರ ಭಗವಂತನ ಸತತ ಸ್ಮರಣೆ ಭಕ್ತನಿಗೆ ಮೋಕ್ಷಕ್ಕೆ ಸಾಧನವೆಂಬುವ ವಿಚಾರಗಳು.

ಒಂಭತ್ತನೆಯ ಅಧ್ಯಾಯದ ಸಾರಾರ್ಥ-

ಸ್ವ ಮಾಹಾತ್ಮ್ಯಂ ಮನುಷ್ಯತ್ವೇ
ಪರತ್ವಂ ಚ ಮಹಾತ್ಮನಾಂ
ವಿಶೇಷೋ ನವಮೋ ಯೋಗೋ
ಭಕ್ತಿರೂಪಃ ಪ್ರಕೀರ್ತಿತಃ

ಭಕ್ತಿರೂಪವಾದ ಉಪಾಸನೆ ರಾಜವಿದ್ಯೆ. ಪರಮಗೋಪ್ಯವಾದ ಪವಿತ್ರವಾದ ಭಗವಂತನ ಮಹಿಮೆ-

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು
ಮಾಮೇ ವೈಷ್ಯಸಿ ಯುಕ್ತ್ವೈವ
ಮಾತ್ಮಾನಂ ಮತ್ ಪರಾಯಣಃ

ಎಂಬುವ ಗೀತೆಯ 34ನೇ ಶ್ಲೋಕದ ಸ್ವಾಮಿಯ ಅಮರ ಸಂದೇಶ. ನನ್ನನ್ನೇ ಸದಾಸ್ಮರಿಸು, ನನ್ನನ್ನೇ ನಂಬಿ ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸಿದರೆ ನನ್ನನ್ನೇ ಹೊಂದುವಿ - ಈ ರಹಸ್ಯ.

ಸ್ವಕಲ್ಯಾಣ ಗುಣಾನಂತ್ಯಂ
ಕೃತ್ಸ್ನಸ್ವಾಧೀನತಾ ಮತಿಃ
ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಾ
ವಿಸ್ತೀರ್ಣಾ ದಶಮೋದಿತಾ

ಪರಮಾತ್ಮನಲ್ಲಿ ಭಕ್ತಿ ವೃದ್ಧಿ ಹೊಂದಲು ಸ್ವಾಮಿಯ ಅನಂತ ಕಲ್ಯಾಣ ಗುಣಗಳನ್ನು ತಿಳಿ: ಅವನ ಐಶ್ವರ್ಯ ವಿಭೂತಿಗಳು ಪರಮಭಕ್ತಿ ಪ್ರಾಪ್ತಿಯು ತನ್ನಿಂದಲೇ ಸಾಧ್ಯವೆಂದು ಗೀತೆಯ 10ನೇ ಅಧ್ಯಾಯದಲ್ಲಿ ಸ್ವಾಮಿ ತಿಳಿಸಿದ್ದಾನೆ.

ಅಹಂ ಸರ್ವಸ್ಯ ಪ್ರಭವೋ
ಮತ್ತಃ ಸರ್ವಂ ಪ್ರವರ್ತತೇ

ಎಂಬುವುದಾಗಿ ತನ್ನ ಅಪಾರ ಶಕ್ತಿಯನ್ನು ತಿಳಿಸಿರುತ್ತಾನೆ.

ಏಕಾದಶೇ ಸ್ವಯಾಥಾತ್ಮ್ಯ
ಸಾಕ್ಷಾತ್ಕಾರಾವ ಲೋಕನಮ್
ದತ್ತಮುಕ್ತಂ ವಿಧಿ ಪ್ರಾಪ್ತ್ಯೋ
ಭಕ್ತ್ಯೇ ಕೋಪಾಯತಾ ತಥಾ

ಹನ್ನೊಂದನೆಯ ಅಧ್ಯಾಯದ ಸಾರಾರ್ಥವು ತನ್ನ ನಿಜ ಸ್ವರೂಪವನ್ನು ನೋಡಲು ಭಗವಂತನು ಅರ್ಜುನನಿಗೆ ದಿವ್ಯ ಚಕ್ಷಸ್ಸು ನೀಡಿದ್ದು. ಭಗವಂತನ ದರ್ಶನಕ್ಕೆ ಒಂದೇ ಉಪಾಯ ಭಕ್ತಿ ಮಾರ್ಗ. ವಿಶ್ವರೂಪದರ್ಶನ, ಪರಮಾತ್ಮನ ಶರೀರದಲ್ಲಿ ಸಮಸ್ತ ಲೋಕಗಳು, ಬ್ರಹ್ಮ, ಶಿವ, ಋಷಿ ದೇವತೆಗಳ ದರ್ಶನ. ಅರ್ಜುನನು ಸುಂದರ ಭಕ್ತಿ ಶ್ಲೋಕಗಳಾದ-

ಪಶ್ಯಾಮಿ ದೇವಾಂ ಸ್ತವ
ದೇವ ದೇಹೇ ಸರ್ವಾಂಸ್ತಥಾ ಭೂತ
ವಿಶೇಷ ಸಂಘಾನ್........
ಅನಾದಿ ಮಧ್ಯಾಂತಂ
ಅನಂತ ವೀರ್ಯಂ ಅನಂತ ಬಾಹುಂ
ಶಶಿ ಸೂರ್ಯನೇತ್ರಂ........

ಇತ್ಯಾದಿ. ಸ್ವಾಮಿಯ ದಿವ್ಯನುಡಿ-

ಮಯ್ಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯ ಸಾಚಿನ್

- ಎಲ್ಲವೂ ನನ್ನ ಅಧೀನ. ನೀನು ನಿಮಿತ್ತ ಮಾತ್ರ ಎಂಬುವ ಸ್ವಾಮಿಯ ಜಗತ್ತಿನ ಸೃಷ್ಟಿ ಸ್ಥಿತಿ ಲಯ ತನ್ನಿಂದಲೇ ಎಂಬುವ ನಂಬುಗೆಯ ನಾಣ್ನುಡಿ, ಸಲ್‌ನುಡಿ.

ಭಕ್ತೇಃ ಶ್ರೇಷ್ಠಂ ಉಪಾಯೋಕ್ತಿ
ಅಶಕ್ತಸ್ಯಾತ್ಮ ನಿಷ್ಠತಾ
ತತ್ ಪ್ರಕಾರಾ ಸ್ತ್ವತಿ ಪ್ರೀತಿ
ಭಕ್ತೇ ದ್ವಾದಶ ಉಚ್ಯತೇ

ಹನ್ನೆರಡನೆಯ ಅಧ್ಯಾಯದ ಭಕ್ತಿಯ ಹಿರಿಮೆಯನ್ನು ಸಾರಲು ಈ ಶ್ಲೋಕವು ಅಕ್ಷೋಪಾಸನೆಗಿಂತ ಭಕ್ತಿಮಾರ್ಗವು ಶೀಘ್ರ ಫಲ ದಾಯಕವು, ಸುಖಕರವು. ನನ್ನನ್ನೇ ನೆನೆ. ಅದು ಸಾಧ್ಯವಾಗದಿದ್ದರೆ, ಆತ್ಮನ ನೆನಪಿನೊಡನೆ ಫಲಗಳನ್ನು ಅಪೇಕ್ಷಿಸದೆ ಕರ್ಮ ಮಾಡುವುದು. ಫಲ ಕರ್ಮಗಳನ್ನು ಅಪೇಕ್ಷಿಸದೇ ಇರುವವರ ಗುಣಗಳನ್ನು ಅದ್ವೇಷ್ಟಾ ಕರ್ಮಭೂತಾನಾಂ - ಮೈತ್ರ, ಕರುಣ, ನಿರ್ಮಮಃ, ನಿರಹಂಕಾರಃ ಸಮದುಃಖ ಸುಖಂ ಕ್ಷಮೀ. ಸಂತುಷ್ಟಃ ಮಯ್ಯರ್ಪಿತ ಮನೋ ಬುದ್ಧಿಃ - ಇತ್ಯಾದಿ ಗುಣಗಳ ಪಟ್ಟಿ ಭಕ್ತನ ಗುಣಗಳ ಕೋಶವೇ ಇಲ್ಲಿದೆ. ಶ್ರದ್ಧ ಧಾನಾ ಮತ್ಪರಮಾಃ ಭಕ್ತಾಸ್ತೇSತೀವ ಮೇ ಪ್ರಿಯಾಃ - ಭಕ್ತರು ನನಗೆ ಅಧಿಕ ಪ್ರಿಯರು.

ದೇಹ ಸ್ವರೂಪ ಮಾತ್ಮಾಪ್ತಿಹೇತುಃ
ಆತ್ಮ ವಿಶೋಧ ನಮ್
ಬಂಧ ಹೇತು ರ್ವಿವೇಕಶ್ಚ
ತ್ರಯೋದಶ ಉದೀರ್ಯತೇ

13 ನೇ ಅಧ್ಯಾಯದಲ್ಲಿ ಹೇಳುವ ದೇಹದ ಸ್ವರೂಪ. ಆತ್ಮಜ್ಞಾನ ಹೊಂದಲು ಜ್ಞಾನದ ಆವಶ್ಯಕತೆ. ಸಂಸಾರ ಬಂಧನಗಳಿಗೆ ಕಾರಣ. ಜೀವಾತ್ಮನು ಶರೀರ ಸಂಬಂಧದಿಂದ ವಿಮುಕ್ತನಾಗಲು ಬೇಕಾದ ವಿವೇಕಜ್ಞಾನದ ವಿಷಯ. ಕ್ಷೇತ್ರ ಕ್ಷೇತ್ರಜ್ಞ ವಿವರಣೆ ಶರೀರ, ಜೀವಾತ್ಮ ಮತ್ತು ಪರಮಾತ್ಮ ತತ್ವಗಳ ಗುಣ ವಿಭಾಗಗಳು ಇಲ್ಲಿ ಸಂಗ್ರಹಿಸಲಾಗಿದೆ.

ಗುಣತ್ರಯವಿಭಾಗಯೋಗ 14 ನೇ ಅಧ್ಯಾಯದ ಅರ್ಥ-



ಗುಣ ಬಂಧ ವಿಧಾತೇಷಾಂ
ಕರ್ತೃತ್ವಂ ತನ್ನಿವರ್ತನಂ
ಗತಿ ತ್ರಯಸ್ಯ ಮೂಲತ್ವಂ
ಚತುರ್ದಶ ಉದೀರ್ಯತೇ

ಸತ್ತ್ವರಜಸ್ತಮೋಗುಣಗಳು ಚೇತನನಿಗೆ ಸಂಸಾರ ಬಂಧವನ್ನು ಉಂಟುಮಾಡುತ್ತವೆ. ತ್ರಿಗುಣಗಳ ಪ್ರಭಾವವನ್ನು ಹೋಗಲಾಡಿಸಿಕೊಳ್ಳಲು ಭಗವಂತನ ಆರಾಧನೆಗಳನ್ನು ಆಚರಿಸುತ್ತಾ ಅವನಲ್ಲಿ ಶರಣ ಹೊಂದುವುದೇ ಏಕೈಕಮಾರ್ಗ.

15ನೇ ಅಧ್ಯಾಯದ ಪುರುಷೋತ್ತಮ ಯೋಗದ ಪ್ರಶಂಸೆ-

ಅಚಿನ್ಮಿಶ್ರಾತ್ ವಿಶುದ್ಧಾಚ್ಚ
ಚೇತನಾತ್ ಪುರುಷೋತ್ತಮಃ
ವ್ಯಾಪನಾತ್ ಭರಣಾತ್ ಸ್ವಾಮ್ಯಾತ್
ಅನ್ಯಃ ಪಂಚದಶೋದಿತಃ

ಅನಾದಿಯಿಂದ ಬದ್ಧ ಜೀವಾತ್ಮರಿಗಿಂತಲೂ, ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಮುಕ್ತ ಜೀವಾತ್ಮರಿಗಿಂತಲೂ ಅಂತರ್ಬಹಿಗಳಲ್ಲಿ ವ್ಯಾಪಿಸಿ ಧರಿಸಿ ನಿಯಾಮಕನಾದ ಪರಮಾತ್ಮನು ಇರುವುದರಿಂದ ಅವನು ಜಗತ್ತು ಜೀವಿಗಳಿಗೆ ಸ್ವತ್ತಾಗಿ ಇದ್ದಾನೆ- ಎಂಬುದರ ಸಂದೇಶ.

ದೈವಾಸುರ ಸಂಪದ್ವಿಭಾಗ ಯೋಗದ ಸಾರಾರ್ಥ-

ದೇವಾಸುರ ವಿಭಾಗೋಕ್ತಿ
ಪೂರ್ವಿಕಾ ಶಾಸ್ತ್ರವಶ್ಯತಾ
ತತ್ತ್ವಾನುಷ್ಠಾನ ವಿಜ್ಞಾನ
ಸ್ಥೇಮ್ನೇ ಷೋಡಶ ಉಚ್ಯತೇ

ಶಾಸ್ತ್ರಗಳಲ್ಲಿ ತಿಳಿಸಿರುವಂತೆ ತತ್ತ್ವಗಳನ್ನು ಅರಿಯುವುದು. ಅದರಂತೆ ಆಚರಿಸುವುದು ಅನುಷ್ಠಾನವು ಅವಶ್ಯಕವೆಂದು ತಿಳಿಸುವ 16 ನೇ ಅಧ್ಯಾಯದ ದೈವಾಸುರ ಸಂಪತ್ತು ಸ್ವಭಾವ ಶಾಸ್ತ್ರದ ಅವಶ್ಯಕತೆ. ಅವರ ನಡೆನುಡಿ ಶಾಸ್ತ್ರಗಳಲ್ಲಿ ತಿಳಿಸಿರುವಂತೆ ಶ್ರದ್ಧೆಯಿಂದ ಎಲ್ಲರೂ ಆಚರಿಸಬೇಕೆಂಬ ಉಪದೇಶಾಮೃತ.

ಅಶಾಸ್ತ್ರ ಮಾಸುರಂ ಕೃತ್ಸ್ನಂ
ಶಾಸ್ತ್ರೀಯಂ ಗುಣತಃ ಪೃಥಕ್
ಲಕ್ಷಣಂ ಶಾಸ್ತ್ರಸಿದ್ಧಸ್ಯ
ತ್ರಿಧಾ ಸಪ್ತದಶೋದಿತಂ

ಗೀತೆಯ 17 ನೆಯ ಅಧ್ಯಾಯದಲ್ಲಿ ಹೇಳಿರುವ ಶಾಸ್ತ್ರ ವಿಧಿಯನ್ನು ಅನುಸರಿಸದೆ ಮಾಡುವ ಯಜ್ಞಾದಿ ಕರ್ಮಗಳೆಲ್ಲವೂ ಅಸುರ ಸ್ವಭಾವಕ್ಕೆ ಸೇರಿದ್ದವು. ಅನರ್ಥಕಾರಿಗಳು ಶಾಸ್ತ್ರಗಳಲ್ಲಿ ಹೇಳಿರುವ ತ್ರಿವಿಧ ಶ್ರದ್ಧೆಗಳು ಸಾತ್ವಿಕ - ರಾಜಸ ತಾಮಸ ಆಹಾರ ಸೇವನೆಗಳು ತ್ರಿವಿಧ ಯಜ್ಞಗಳು ತ್ರಿವಿಧ ತಪಸ್ಸುಗಳು. ತ್ರಿವಿಧ ಧ್ಯಾನಗಳು - ಎಲ್ಲವನ್ನೂ ಶ್ರದ್ಧಾಭಕ್ತಿಗಳು. ಓಂ ತತ್ ಸತ್ ಎಂಬುವುದಾಗಿ ಭಗವತ್ ಕೈಂಕರ್ಯ ರೂಪವಾಗಿ ಆಚರಿಸಬೇಕೆಂಬ ಉಪದೇಶ.

ಭಗವದ್ಗೀತೆಯ 18 ನೇ ಅಧ್ಯಾಯದ ಮೋಕ್ಷ ಸನ್ಯಾಸ ಯೋಗ-

ಈಶ್ವರೇ ಕರ್ತೃತಾ ಬುದ್ಧಿಃ
ಸತ್ತ್ವೋಪಾದೇ ಯತಾನ್ತಿ ಮೇ
ಸ್ವಕರ್ಮ ಪರಿಣಾಮಶ್ಚ
ಶಾಸ್ತ್ರಸಾರಾರ್ಥ ಉಚ್ಯತೇ

ಸರ್ವೇಶ್ವರನಲ್ಲಿ ದೃಢವಿಶ್ವಾಸ ಆತನೇ ಕರ್ಮಗಳ ಕರ್ತ, ಎಲ್ಲರ ಅಂತರ್ಯಾಮಿಯಾಗಿರುವುದರಿಂದ ತ್ಯಾಗ ಸನ್ಯಾಸ. ಎರಡೂ ಒಂದೇ - ವರ್ಣಾಶ್ರಮಕ್ಕೆ ತಕ್ಕಂತೆ ಕರ್ತವ್ಯ ಕರ್ಮಗಳನ್ನು ಭಗವದಾರಾಧನ ರೂಪವಾಗಿ ಮಾಡಿದರೆ ಮೋಕ್ಷ ಪ್ರಾಪ್ತಿ. ಗೀತೆಯ ಸಾರ ಸರ್ವಸ್ವ. ಶರಣಾಗತಿಯೋಗದ ಚರಮೋಪದೇಶ. ಭಗವಂತನಿಗೆ ಎಲ್ಲವನ್ನೂ ಅರ್ಪಿಸಿ ಶರಣು ಹೋದರೆ ನಮ್ಮಗಳ ಯೋಗ ಕ್ಷೇಮವನ್ನು ಆತನೇ ನೋಡಿಕೊಳ್ಳುತ್ತಾನೆ. ಕೊನೆಯ 10 ಶ್ಲೋಕಗಳಲ್ಲಿ ಯಾಮುನರು ಕರ್ಮಯೋಗ ಭಕ್ತಿಯೋಗ ಜ್ಞಾನಿಯಾದ ಭಕ್ತನು ಭಗವಂತನನ್ನು ಧ್ಯಾನಮಾಡುವ ಶರಣಾಗತಿಯನ್ನು ತಿಳಿಸಿರುತ್ತಾರೆ. ಗೀತಾ ಯಜ್ಞದಲ್ಲಿ ಶ್ರೀ ಶ್ರೀ ತ್ರಿದಂಡಿ ಚಿನ್ನ ಶ್ರೀಮನ್ನಾರಾಯಣ ಜೀಯರ್ ರವರು ಆಂಧ್ರದಲ್ಲೂ ಭಾರತ ವಿದೇಶಗಳಲ್ಲಿ ಕೃಷ್ಣಂವಂದೇ ಜಗದ್ಗುರುಂ ಎಂಬುವ ಯೋಜನೆಯಲ್ಲಿ ನಾಲ್ಕು ಕೋಟಿ ಗೀತಾ ಗ್ರಂಥಗಳ ವಿತರಣೆ ಶ್ಲಾಘನೀಯವಾದುದು. ಗೋರಖ್ ಪುರದ ಗೀತಾಪ್ರೆಸ್‌ನವರು ಎಲ್ಲಾ ದೇಶೀಯ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಗೀತೆಯನ್ನು ಪ್ರಕಟಿಸಿ ವಿಶ್ವ ದಾಖಲೆಯನ್ನು ನಿರ್ಮಿಸಿದ್ದಾರೆ. ಶ್ರೀರಾಮಕೃಷ್ಣಾಶ್ರಮ, ಚಿನ್ಮಯಾನಂದ ಮಿಷನ್, ಇತ್ತೀಚೆಗೆ ಇಸ್ಕಾನ್ ಸಂಸ್ಥೆ ಅನೇಕ ಭಾಷೆಗಳಲ್ಲಿ ಪ್ರಕಟಿತವಾಗಿ ಗ್ರಂಥದ ಕನ್ನಡ ಅವತರಣೆಯು ಕನ್ನಡದಲ್ಲಿ 2,50,000 ಪ್ರತಿ ಮಾರಾಟದ ಪುಸ್ತಕಣಾ ಉತ್ಸವ ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿ ಡಾ|| ಯು. ಆರ್. ಅನಂತಮೂರ್ತಿ ಅಧ್ಯಕ್ಷತೆಯಲ್ಲಿ ಇತ್ತೀಚೆಗೆ ನಡೆದಿದೆ. ಇದರಿಂದ ಗೀತಾ ವೈಭವವನ್ನು ವರ್ಣಿಸಲು ಸಾಧ್ಯವಿಲ್ಲ.

(ಕಲ್ಕತ್ತದ ಒಂದು ಧರ್ಮ ಸಂಸ್ಥೆ ಸರ್ವೇಪಲ್ಲಿ ರಾಧಾಕೃಷ್ಣನ್ ಅವರ ಗೀತಾ ವ್ಯಾಖ್ಯಾನದ ಇಂಗ್ಲೀಷ್ ಕೃತಿಯನ್ನು ಉಚಿತವಾಗಿ ವಿತರಿಸುತ್ತಿದೆ. ತಿ. ತಿ. ದೇವಸ್ಥಾನಗಳು ಹಲವು ಗೀತಾ ವ್ಯಾಖ್ಯಾನ ಕೃತಿಗಳನ್ನು ಕನ್ನಡ, ತೆಲುಗು, ತಮಿಳು, ಹಿಂದಿ ಆಂಗ್ಲಭಾಷೆಗಳಲ್ಲಿ ಪ್ರಕಟಿಸುತ್ತ ಕೈಗೆಟುಕುವ ದರಗಳಲ್ಲಿ ವಿತರಿಸುತ್ತಿವೆ. ಶಿಷ್ಟ್ಲಾ ಸುಬ್ಬಾರಾವ್ ಅವರ ತೆಲುಗು ವಿವರಣೆಯ ಭಗವದ್ಗೀತೆ. ಲೋಕ ಮಾನ್ಯರು ಬರೆದ ಕರ್ಮಯೋಗಶಾಸ್ತ್ರದ ತೆಲುಗು ಅವತರಣಿಕೆ, ಎಸ್. ಟಿ. ರಘುನಾಥಾಚಾರ್ಯರ ನಮ್ಮ ಸಮಸ್ಯೆಗಳಿಗೆ ಭಗವದ್ಗೀತೆಯ ಪರಿಷ್ಕಾರ, (ಹಲವು ಭಾಷೆಗಳಲ್ಲಿ) ಗೀತಾಮಕರಂದ ಮೊದಲಾಗಿ ಹಲವು ಪುಸ್ತಕಗಳು ವಿಶಿಷ್ಟವಾದವು ಎನ್ನಬೇಕು. ಇಂಗ್ಲೀಷಿನ ಹಾಗೂ ತೆಲುಗಿನಲ್ಲಿ ಗೀತಾ ವ್ಯಾಖ್ಯಾನಗಳು ತಾತ್ಪರ್ಯಗಳು ಹಲವು ಮುದ್ರಣಗಳನ್ನು ಕಂಡು ಜನಪ್ರಿಯವಾಗಿವೆ. ಕಾಲದಿಂದ ಕಾಲಕ್ಕೆ ಭಗವದ್ಗೀತೆಯ ವಿವಿಧ ಅವತರಣಿಕೆಗಳನ್ನು ವಾಚಕರ ಕೈಗಿಡುವುದು ತಿ.ತಿ.ದೇ.ಗಳ ಉದ್ದೇಶವಾಗಿದೆ. -[illegible])

★★★★★

# ಗೀತೆಯ ತಿರುಳು

- ವಿದ್ವಾನ್ ಕಸ್ತೂರಿ ರಂಗರಾಜನ್.

ಗೀತೆಯ ತಿರುಳೇನೆಂಬ ಬಗ್ಗೆ ಅಭಿಪ್ರಾಯ ಹಲವುಂಟು. ಕೆಲವರು ಅದರ ತಿರುಳು ಕರ್ಮಯೋಗವೆಂದು, ಮತ್ತೆ ಕೆಲವರು ಜ್ಞಾನಮಾರ್ಗವೆಂದೂ, ಮಗದೊಂದು ಕೆಲವರು ಭಕ್ತಿಯೋಗವೆಂದೂ ಅಭಿಪ್ರಾಯಪಡುವರು. ಆದರೆ ಭಗವದ್ರಾಮಾನುಜರ ಪರಮಾಚಾರ್ಯರಾದ ಯಾಮುನರು - ಸ್ವಧರ್ಮಜ್ಞಾನ, ವೈರಾಗ್ಯ ಸಾಧ್ಯ ಭಕ್ತ್ಯೈಕ ಗೋಚರಃ ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರತಃ - ಎಂದು ಈ ವಿವಾದವನ್ನು ಬಹಳ ಸೊಗಸಾಗಿ ಪರಿಹರಿಸಿದ್ದಾರೆ. ಎಂದರೆ, ಗೀತೆಯ ಸಾರವು, ಸ್ವಧರ್ಮ ಸ್ವರೂಪವಾದ ಕರ್ಮ ವೈರಾಗ್ಯ, ಜ್ಞಾನ ಮತ್ತು ಭಕ್ತಿ ಇವೆಲ್ಲ ಅಂಶಗಳ ಬಂದು ಸಮನ್ವಯವಷ್ಟೇ. ಇವುಗಳಲ್ಲಿ ಯಾವುದೊಂದೂ ಉಪೇಕ್ಷಾರ್ಹವಲ್ಲವೆಂಬುದು ಇಂಗಿತ.

ಪ್ರಾಯಃ ನಾವು ನಮ್ಮ ಮೂಲ ಧ್ಯೇಯವನ್ನು ಮರೆಯುವುದೇ ಈ ಎಲ್ಲ ಜಿಜ್ಞಾಸೆ, ಘರ್ಷಣೆಗಳಿಗೂ ಕಾರಣವೆನಿಸುತ್ತದೆ. ಮನುಷ್ಯನು ವಿಚಾರಶೀಲನಾಗಿರಬೇಕೆಂಬುದೇನೋ ನಿಜ, ಆದರೆ, ಆತನ ವಿಚಾರಕ್ಕೆ ಲಕ್ಷ್ಯವಿಲ್ಲವಾಯಿತೆಂದರೆ ಶುಷ್ಕವೇಸರಿ,. ಲಕ್ಷ್ಯವೇ ಇಲ್ಲದ ವ್ಯರ್ಥಜಿಜ್ಞಾಸೆಯು ವಿವಾಹದ ಗಲಭೆಯಲ್ಲಿ ಮಾಂಗಲ್ಯಧಾರಣೆಯನ್ನು ಮಾಡಿಸಲು ಮರೆತಂತೆ ಆಗುವುದು. ಎಂದರೆ, ಯಾವುದನ್ನು ಕುರಿತು ಮುಖ್ಯವಾಗಿ ಆಲೋಚಿಸಬೇಕೋ ಅದನ್ನು ಬಿಟ್ಟು ಇತರ ವ್ಯರ್ಥವಾದ ಕೆಲಸಗಳಲ್ಲಿ ತೊಡಗಿದಂತಾಗುತ್ತದೆ.

ಆದ್ದರಿಂದ ಮನುಷ್ಯನು ಲಕ್ಷ್ಯಜೀವಿಯಾಗಬೇಕೇ ಹೊರತು ಶುಷ್ಕವಾದ ಬುದ್ಧಿಜೀವಿಯಲ್ಲ, ಬುದ್ಧಿಯು ಬೇಕು, ನಿಜ. ಆದರೆ ಅದು ಲಕ್ಷ್ಯಕ್ಕೆ ಅಥವಾ ಗುರಿಗೆ ಅಧೀನವಾಗಿರಬೇಕು. ಈ ಲಕ್ಷ್ಯವು ಯಾವುದು? ಇದೇನೂ ಲೌಕಿಕವಲ್ಲ, ಮನುಷ್ಯನ ಗುರಿಯು ಕೇವಲ ಪ್ರಾಪಂಚಿಕ ಸುಖಸಾಧನೆಯಲ್ಲ. ಗೀತೆಯ ಪ್ರಕಾರ ಈ ಲಕ್ಷ್ಯವು ಆಧ್ಯಾತ್ಮಿಕವಾದುದು. ಎಂದರೆ, ಭಗವಂತನ ಪ್ರಾಪ್ತಿಯೇ ಮನುಷ್ಯ ಜೀವನದ ಅಂತಿಮಧ್ಯೇಯ. ಈ ಧ್ಯೇಯಪ್ರಾಪ್ತಿಗೆ ಇರುವ ಸಾಧನಗಳು ಹಲವಾರು. ಇದು ಮನುಷ್ಯನ ಸಂಸ್ಕಾರ ಸಾಮರ್ಥ್ಯಗಳನ್ನು ಅವಲಂಬಿಸಿದೆ. ರೋಗಗಳು ಅನೇಕ ವಿಧವಿರುವುದರಿಂದ ಎಲ್ಲರಿಗೂ ಒಂದೇ ಔಷಧವನ್ನು ಕೊಡಲು ಅಸಾಧ್ಯವಷ್ಟೇ! ಅಂತೆಯೇ ಮನುಷ್ಯರಲ್ಲಿನ ಸಾಮರ್ಥ್ಯ ವೈವಿಧ್ಯಕ್ಕನುಗುಣವಾಗಿ ಸಾಧನದಲ್ಲೂ ಅನೇಕತೆಯು ಕಂಡುಬರುತ್ತದೆ. ವ್ಯಕ್ತಿಗಳ ಸ್ವರೂಪ ಸ್ವಭಾವಾದಿಗಳಿಗೆ ಅನುಸಾರವಾಗಿ ಸಾಧನಗಳನ್ನು ನಿರ್ಣಯಿಸಲಾಗಿದೆ. ಈ ಸಂದರ್ಭದಲ್ಲಿ ''ಆತ್ಮಬುದ್ಧಿ ಸುಖಂಚೈವ ಗುರುಬುದ್ಧಿರ್ವಿಶೇಷತಃ'' ಎಂಬ ನ್ಯಾಯವು ಅರ್ಥಪೂರ್ಣವಾಗುತ್ತದೆ. ಎಂದರೆ, ಸಾಧನೆಯ ಸಂದರ್ಭದಲ್ಲಿ ನಮಗೆ ಪೂಜ್ಯರಾದವರಲ್ಲಿ ನಾವು ನಮ್ಮ ಸ್ವರೂಪವನ್ನು ತನ್ಮೂಲಕ ನಾವು ಅನುಸರಿಸಬೇಕಾದ ಮಾರ್ಗವನ್ನು ನಿರ್ಣಯಿಸಿಕೊಳ್ಳಬೇಕಾಗುವುದು.

ಈ ಮಾರ್ಗವು ಒಬ್ಬನಿಗೆ ಎಲ್ಲಾ ಸಂದರ್ಭಗಳಲ್ಲೂ ಒಂದೇ ರೀತಿಯಲ್ಲಿ ಇರಲು ಸಾಧ್ಯವಿಲ್ಲ. ಒಂದೊಂದು ಹಂತದಲ್ಲಿ ಅವನಿಗೆ ಒಂದೊಂದು ಸಾಧನವು ಅಗತ್ಯ. ಒಂದು ಊರಿಂದ ಬಹುದೂರದ ಮತ್ತೊಂದು ಊರನ್ನು ತಲುಪಬೇಕಾದರೆ ಆ ಪ್ರಯಾಣದಲ್ಲಿ ಸ್ವಲ್ಪ ನಡೆ, ಸ್ವಲ್ಪ ಆಟೋ, ರೈಲು, ಟಾಂಗ, ಬಸ್ಸು ಮತ್ತೆ ನಡೆ ಇರಬಹುದು. ಇವೆಲ್ಲಾ ಸೇರಿದರೇನೇ ಸೇರಬೇಕಾದ ಊರನ್ನು ಅರ್ಥಾತ್ ಗುರಿಯನ್ನು ತಲುಪಲು ಸಾಧ್ಯ. ಹೀಗೆ ಗುರಿಯನ್ನು ತಲುಪಲು ನಾವು ಅನುಸರಿಸುವ ಮಾರ್ಗಗಳು ಸಂದರ್ಭಾನುಸಾರವಾಗಿ ಹಲವಾರು ಆಗುತ್ತದೆ. ಈ ಹಿನ್ನಲೆಯಲ್ಲೇ ನಾವು ಯಾಮುನರ ನುಡಿಮುತ್ತುಗಳನ್ನು ಅರ್ಥೈಸಬೇಕಾಗುವುದು. ಎಂದರೆ, ಗೀತೆಯ ತಿರುಳು ಕೇವಲ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗವಷ್ಟೇ ಅಲ್ಲ, ಅದರೊಂದಿಗೆ ಸ್ವಧರ್ಮಾಚರಣೆ ವಿವೇಕ, ವೈರಾಗ್ಯ, ಮತ್ತು ಭಕ್ತಿ ಇವೆಲ್ಲ ಅಂಗಗಳ ಸಮರಸ, ಸಮ್ಮಿಳಿತ, ಸಂಯೋಗ ಆಗಿದೆ. ಪರಮಾತ್ಮನ ಪ್ರಾಪ್ತಿಗೆ ವಿವಿಧ ಹಂತಗಳಲ್ಲಿ ಇವೆಲ್ಲವೂ ಅತ್ಯಂತ ಅಗತ್ಯ. ಮನುಷ್ಯನ ಕ್ರಿಯಾಶೀಲತೆಯ ಅಂಶವು ಪ್ರಧಾನವಾಯಿತೆಂದರೆ, ಆ ಹಂತದಲ್ಲಿ ಅವನಿಗೆ.

ಕರ್ಮಣೈವಹಿ ಸಂಸಿದ್ಧಿಂ
ಆ ಸ್ಥಿತಾ ಜನಕಾದಯಃ
ಲೋಕ ಸಂಗ್ರಹ ಮೇವಾಪಿ
ಸಂಪಶ್ಯನ್ಕರ್ತುಮರ್ಹಸಿ

-ಅಧ್ಯಾಯ 3 ಶ್ಲೋಕ 20

ಎಂಬ ಗೀತಾವಾಕ್ಯವೇ ಸತ್ವಪೂರಿತವಾಗುತ್ತದೆ. ಹಾಗಿಲ್ಲದೇ, ಅವನಲ್ಲಿ ವಿವೇಚನೆಯು ಪ್ರಧಾನವಾದಾಗ-

ನಹಿ ಜ್ಞಾನೇನ ಸದೃಶಂ
ಪವಿತ್ರ ಮಿಹ ವಿದ್ಯತೆ
ತತ್ಸ್ವಯಂ ಯೋಗ ಸಂಸಿದ್ಧಃ
ಕಾಲೇನಾತ್ಮನಿ ವಿಂದತಿ

- ಅಧ್ಯಾಯ 4 ಶ್ಲೋಕ 38

- ಎಂಬ ವಾಕ್ಯವು ಅರ್ಥಪೂರ್ಣವಾಗುತ್ತದೆ. ಹಾಗೆಯೇ ಅವನಲ್ಲಿ ಭಾವನಾತ್ಮಕ ಅಂಶವು ಪ್ರಧಾನವಾಯಿತೆಂದರೆ-

ಭಕ್ತ್ಯಾತ್ವನನ್ಯಯಾ ಶಕ್ಯ
ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ
ಪ್ರವೇಷ್ಟುಂ ಚ ಪರಂತಪ

- ಅಧ್ಯಾಯ 11 ಶ್ಲೋಕ 54.

ಎಂಬ ಗೀತೆಯ ನುಡಿಯು ಸಂಗತವಾಗುತ್ತದ.

★★★★★

## ಆರ್ಜಿತ ಸೇವೆಗಳು

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ – ತಿರುಮಲ

| ಕ್ರ.ಸಂ | ಸೇವೆ/ಉತ್ಸವ | ಪ್ರವೇಶ | ದಿನ | ಶುಲ್ಕ |
|---|---|---|---|---|
| **I. ದೈನಿಕ ಸೇವೆಗಳು :** | | | | |
| 1. | ಸುಪ್ರಭಾತ | 1 | ಪ್ರತಿದಿನ | ರೂ. 120-00 |
| 2. | ತೋಮಾಲಸೇವೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 3. | ಅರ್ಚನೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 4. | ಏಕಾಂತಸೇವೆ | 1 | ಪ್ರತಿದಿನ | ರೂ. 120-00 |
| 5. | ಕಲ್ಯಾಣೋತ್ಸವ | 5 | ಪ್ರತಿದಿನ | ರೂ. 2500-00 |
| 6. | ವಿಶೇಷ ಕಲ್ಯಾಣೋತ್ಸವ | 2 | ಪ್ರತಿದಿನ | ರೂ. 750-00 |
| 7. | ಆರ್ಜಿತ ಬ್ರಹ್ಮೋತ್ಸವ | 5 | ಪ್ರತಿದಿನ | ರೂ. 1000-00 |
| 8. | ಡೋಲೋತ್ಸವ | 5 | ಪ್ರತಿದಿನ | ರೂ. 1000-00 |
| 9. | ಅರ್ಚನಾನಂತರ ದರ್ಶನ | 1 | ಶುಕ್ರವಾರ ಹೊರತು | ರೂ. 100-00 |
| 10. | ಸಹಸ್ರ ದೀಪಾಲಂಕಾರಸೇವೆ | 5 | ಪ್ರತಿದಿನ | ರೂ. 1000-00 |
| 11. | ವಸಂತೋತ್ಸವ | 10 | ಪ್ರತಿದಿನ | ರೂ. 3000-00 |
| **II. ವಾರ ಸೇವೆಗಳು :** | | | | |
| 1. | ವಿಶೇಷ ಪೂಜೆ | 5 | ಸೋಮವಾರ | ರೂ. 3000-00 |
| 2. | ಅಷ್ಟದಳ ಪಾದಪದ್ಮಾರಾಧನೆ | 2 | ಮಂಗಳವಾರ | ರೂ. 2500-00 |
| 3. | ಸಹಸ್ರ ಕಲಶಾಭಿಷೇಕ | 6 | ಬುಧವಾರ | ರೂ. 5000-00 |
| 4. | ತಿರುಪ್ಪಾವಡಾ | 6 | ಗುರುವಾರ | ರೂ. 5000-00 |
| 5. | ಪೂರಾಭಿಷೇಕ | 1 | ಶುಕ್ರವಾರ | ರೂ. 750-00 |
| 6. | ಪುನುಗುಬಟ್ಟಲು | 1 | ಶುಕ್ರವಾರ | ರೂ. 300-00 |
| 7. | ಕಸ್ತೂರಿ ಬಟ್ಟಲು | 1 | ಶುಕ್ರವಾರ | ರೂ. 150-00 |
| 8. | ನಿಜಪಾದ ದರ್ಶನ | 1 | ಶುಕ್ರವಾರ | ರೂ. 100-00 |
| 9. | ವಸ್ತ್ರಾಲಂಕಾರ ಸೇವೆ | 2 | ಶುಕ್ರವಾರ | ರೂ. 12250-00 |
| **III. ವಾರ್ಷಿಕ ಉತ್ಸವಗಳು :** | | | | |
| 1. | ವಸಂತೋತ್ಸವ | 10 | ಏಪ್ರಿಲ್ | ರೂ. 3000-00 |
| 2. | ಪದ್ಮಾವತೀ ಪರಿಣಯ | 5 | ಮೇ | ರೂ. 5000-00 |
| 3. | ಅಭಿಧ್ಯೇಕ ಅಭಿಷೇಕ | 5 | ಜೂನ್ | ರೂ. 2000-00 |
| 4. | ಪುಷ್ಪ ಪಲ್ಲಕ್ಕಿ | 5 | ಜುಲೈ | ರೂ. 1000-00 |
| 5. | ಪವಿತ್ರೋತ್ಸವ | 2 | ಆಗಸ್ಟ್ | ರೂ. 5000-00 |
| 6. | ಪುಷ್ಪಯಾಗ | 5 | ನವಂಬರ್ | ರೂ. 3500-00 |
| 7. | ಕೋಯಿಲ್ ಆಳ್ವಾರ್ ತಿರುಮಂಜನ | 10 | ವರ್ಷಕ್ಕೆ 4 ಬಾರಿ | ರೂ. 3000-00 |
| 8. | ಪ್ಲವೋತ್ಸವ | 5 | ವರ್ಷಕ್ಕೆ 5 ದಿನ | ರೂ. 2500-00 |

ಆರ್ಜಿತ ಸೇವೆ ಮಾಡಬಯಸುವ ಯಾತ್ರಿಕರು ತಕ್ಕ ಹಣದ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು 90 ದಿನ ಮೊದಲು ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗಾಗಿ ವಿಚಾರಿಸಿ - ದೂರವಾಣಿ - 08574 - 79277.

**(WWW. Tirumala.com ವೆಬ್‌ಸೈಟ್‌ನ ಮೂಲಕವೂ ಆರ್ಜಿತ ಸೇವೆಗಳನ್ನು ರಿಸರ್ವ ಮಾಡಿಸಬಹುದು.)**



# ಪುರಾಣಗಳಲ್ಲಿ ವೈಷ್ಣವ ತತ್ತ್ವ

ವಿದ್ವಾನ್ 'ರಘುಸುತ'

ಅಷ್ಟಾದಶಪುರಾಣಗಳಲ್ಲಿ ಸಾತ್ತ್ವಿಕ ಪುರಾಣಗಳು ಆರು, ರಾಜಸಪುರಾಣಗಳು ಆರು, ತಾಮಸ ಪುರಾಣಗಳು ಆರು ಇವೆ. ಇವುಗಳಲ್ಲಿ ಸಾತ್ತ್ವಿಕ ಪುರಾಣಗಳಲ್ಲಿ ಮಹಾವಿಷ್ಣುವಿನ ಮಹಿಮೆ, ಆತನ ರಕ್ಷಕತ್ತ್ವದ ಸ್ವರೂಪ, ಆತನಿಂದ ಪಡೆಯುವ ಮೋಕ್ಷಕ್ಕೆ ಮಾರ್ಗ - ಇತ್ಯಾದಿಗಳ ವಿವರಗಳು ಇರುವುದರಿಂದ ಶ್ರೀವೈಷ್ಣವರಿಗೆ ಈ ಪುರಾಣಗಳು ಮುಖ್ಯವಾದುವು. ಇದರ ದರ್ಶನಾಚಾರ್ಯರುಗಳು ತಮ್ಮ ವಿಶಿಷ್ಟಾದ್ವೈತ ತತ್ತ್ವಗಳ ಪ್ರತಿಪಾದನೆಗಾಗಿ ಇವುಗಳಲ್ಲಿನ ವಿಷ್ಣುತತ್ತ್ವ ಹೇಳಿಕೆಗಳನ್ನು ಬಹಳಷ್ಟು ಉಪಯೋಗಿಸಿಕೊಂಡಿದ್ದಾರೆ.

**1. ವಿಷ್ಣುಪುರಾಣ:** ಸಾತ್ತ್ವಿಕ ಪುರಾಣಗಳು ಹೆಚ್ಚಾಗಿ ಭಗವಂತನ ಸಾತ್ತ್ವಿಕ ಗುಣಗಳ ಪ್ರಾಧಾನ್ಯತೆಯನ್ನೆ ವಿವರಿಸಿವೆ. ಇದರಲ್ಲಿನ ವಿಷ್ಣುಪುರಾಣವು ವಿಷ್ಣುವಿನ ಮಹಿಮೆಯನ್ನು ವಿವರಿಸುವ ಗ್ರಂಥವಾಗಿದೆ.

ಭಗವಾನ್ ವಿಷ್ಣುವು ಸತ್ತ್ವಗುಣ ಸಂಪನ್ನನಾದುದರಿಂದಲೂ, ಸಾತ್ತ್ವತಾಂಪತಿಯಾಗಿರುವುದರಿಂದಲೂ, ಅಂತಹ ವಿಷ್ಣು ಭಗವಾನನ ವಿಶೇಷಾದಿಗಳನ್ನು ಈ ಪುರಾಣವು ವಿವರಿಸುತ್ತದೆ.

ವೇದೇಷು ಪೌರುಷಂ ಸೂಕ್ತಂ
ಧರ್ಮ ಶಾಸ್ತ್ರೇಷು ಮಾನಸಂ
ಭಾರತೇ ಭಗವದ್ಗೀತಾ
ಪುರಾಣೇಷು ಚ ವೈಷ್ಣವಮ್

ವೇದಗಳಲ್ಲಿ ಪುರುಷಸೂಕ್ತವೂ, ಧರ್ಮಶಾಸ್ತ್ರಗಳಲ್ಲಿ ಮನುಸ್ಮೃತಿಯೂ, ಮಹಾಭಾರತದಲ್ಲಿ ಭಗವದ್ಗೀತೆಯೂ, ಪುರಾಣಗಳಲ್ಲಿ ವಿಷ್ಣುಪುರಾಣವೂ ಪ್ರಮುಖವಾದವುಗಳು ಎಂದು ಹೇಳಲಾಗುತ್ತದೆ.

ಇಂತಹ ಪ್ರಮುಖ ಸ್ಥಾನವನ್ನು ಅಲಂಕರಿಸಿರುವ ಈ ಪುರಾಣದಲ್ಲಿ ಎರಡು ಭಾಗಗಳಿದ್ದು, ಇವೆರಡರಲ್ಲೂ ಆರು ಭಾಗ (ಅಂಶ)ಗಳಿವೆ. ಇವೆರಡರಲ್ಲಿನ ಆರು ಅಂಶಗಳಲ್ಲಿ 126 ಅಧ್ಯಾಯಗಳಿದ್ದು, ಒಟ್ಟು 23,000 ಶ್ಲೋಕಗಳಿವೆ.

ಈ ಪುರಾಣವು ಪಾಂಚರಾತ್ರಕ್ಕೆ ಸೇರಿದ ಶ್ರೀ ವೈಷ್ಣವ ಮತೀಯ ಗ್ರಂಥವಾದರೂ, ಆ ಮತಕ್ಕೆ ಸಂಬಂಧಪಡದ ವಿಷಯಗಳೂ ಇವೆ. ಇದರ ಐದನೇ ಭಾಗದಲ್ಲಿ ಬೃಂದಾವನ ಹಾಗೂ ದ್ವಾರಕೆಗಳಲ್ಲಿ ಶ್ರೀಕೃಷ್ಣನು ನಡೆಸಿದ ಲೀಲಾವಿನೋದಗಳು ಹಾಗೂ ಸಾಹಸಕೃತ್ಯಗಳ ನಿರೂಪಣೆ ಇದ್ದು, ತುಂಬಾ ವಿಸ್ತಾರವಾಗಿದೆ.

ಆರನೇ ಭಾಗದಲ್ಲಿ ಕಲಿಯುಗದ ದೋಷಗಳು ಹಾಗೂ ಈ ಯುಗದಲ್ಲಿ ಜನಿಸಿದವರ ದೋಷಗಳನ್ನು ನಿರಾಕರಿಸಿಕೊಳ್ಳುವುದರ ಬಗೆಗೆ ವಿವರಗಳನ್ನು ನೀಡಲಾಗಿದೆ. ಇದಕ್ಕಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದೂ ತಿಳಿಸಲಾಗಿದೆ. ಈ ಪರಬ್ರಹ್ಮನೇ ಭಗವಾನ್ ವಿಷ್ಣುವೆಂದೂ ಇದರಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ವರಾಹಕಲ್ಪ ವೃತ್ತಾಂತ
ಮಧಿಕೃತ್ಯ ಪರಾಶರಃ
ಯತ್ರಾತ್ರ ಧರ್ಮಾನಖಿಲಾನ್
ತದುಕ್ತಂ ವೈಷ್ಣವಂ ವಿದುಃ
(ಮತ್ಸ್ಯಪುರಾಣ - 53ನೇ ಅಧ್ಯಾಯ)

ಈ ಪುರಾಣದಲ್ಲಿನ ಪೂರ್ವಖಂಡದಲ್ಲಿ ಶ್ವೇತವರಾಹಕಲ್ಪದಲ್ಲಿನ ವೃತ್ತಾಂತವನ್ನು ಆಧಾರವಾಗಿಟ್ಟುಕೊಂಡು ಪರಾಶರ ಮಹರ್ಷಿಯು ಗ್ರಹಿಸಿದ ಧರ್ಮಗಳನ್ನು ವಿವರಿಸಲಾಗಿದೆ. ಅಂತಹ ವಿಷ್ಣುಪುರಾಣದಲ್ಲಿನ ಪೂರ್ವಭಾಗದಲ್ಲಿ ಸೃಷ್ಟಿಕ್ರಮ, 'ವಾಸುದೇವ' ಶಬ್ದದ ನಿರ್ವಚನ, 'ನಾರಾಯಣ' ಶಬ್ದದ ನಿರ್ವಚನ, ಇಂದ್ರನ ಗರ್ವಭಂಗ, ಕ್ಷೀರಸಾಗರ ಮಥನ, ಲಕ್ಷ್ಮೀ ಪ್ರಾಪ್ತಿ ಕ್ರಮ, ಧ್ರುವೋಪಾಖ್ಯಾನ, ಪ್ರಹ್ಲಾದ ಚರಿತ್ರೆ, ಜಡಭರತೋಪಾಖ್ಯಾನ, ಸಗರನ ಚರಿತ್ರೆ, ಶ್ರೀರಾಮ ಚರಿತ್ರೆ, ಶ್ರೀಕೃಷ್ಣ ಜನನ, ಶ್ರೀಕೃಷ್ಣಲೀಲೆಗಳು, ಕಾಳಿಂಗಮರ್ದನ, ಧೇನಕಾಸುರ ಸಂಹಾರ ಗೋವರ್ಧನೋದ್ಧರಣ, ರಾಸಕ್ರೀಡೆ, ಜರಾಸಂಧ ವಧೆ, ಪಾರಿಜಾತೋಪಹರಣ, ಬಾಣಾಸುರ ವಧೆ, ಶ್ರೀಕೃಷ್ಣ ನಿರ್ಯಾಣಂ - ಇತ್ಯಾದಿ ಚರಿತ್ರಾಂಶಗಳೇ ಅಲ್ಲದೆ ಮಧ್ಯೆ ಮಧ್ಯೆ ಸಂದರ್ಭೋಚಿತವಾಗಿ ಶ್ರೀವೈಷ್ಣವ ಮಹಾತ್ಮ್ಯೆ,





ಶ್ರೀವೈಷ್ಣವ ಲಕ್ಷಣ, ವರ್ಣಾಶ್ರಮ ಧರ್ಮಗಳು, ಕಲಿಯುಗ ದೋಷಾದಿ ವಿವರಣೆ, ಕಲಿಯುಗದ ಧರ್ಮಗಳು, ಯಮ ನಿಯಮಾದಿ ಅಷ್ಟಾಂಗ ಯೋಗಗಳು - ಇತ್ಯಾದಿ ಅನೇಕ ವಿಷಯಗಳನ್ನು ವಿವರಿಸಲಾಗಿದೆ.

ಈ ಪುರಾಣವು ಹಿಂದಿನ ಕಾಲದಲ್ಲಿ ಭಾರತದ ಇತರೇ ಭಾಷೆಗಳಿಗೂ ಅನುವಾದವಾಗಿ, ಆಯಾ ಪ್ರದೇಶದ ಮಹಾವಿಷ್ಣುವಿನ ರೂಪಗಳ, ಅವತಾರಗಳ ಮಹಿಮೆಯನ್ನು ಅಲ್ಲಲ್ಲಿ ಸೇರಿಸಲಾಗಿದೆ. ಆದರೂ ಮೂಲದ ಸತ್ತ್ವಗಳು ಕಣ್ಮರೆಯಾಗಿಲ್ಲ.

ಇದರಲ್ಲಿ ವಿಷ್ಣು ಪ್ರಭಾವವನ್ನು ವಿವರಿಸುತ್ತಾ ಆಶ್ರಿತರಾದ ಭಕ್ತರನ್ನು ರಕ್ಷಿಸುವವನು ಆ ವಿಷ್ಣುವೆ ಎಂದೂ, ಆತನೇ ದೇವತೆಗಳಲ್ಲೆಲ್ಲ ವ್ಯಾಪಿಸಿರುವನೆಂದೂ, ಆತನೇ ಸರ್ವ ವಿಶ್ವಕ್ಕೂ ಗುರುವಾಗಿರುವನೆಂದೂ, ಸಕಲ ಚರಾಚರ ಪ್ರಪಂಚವೂ ವಿಷ್ಣುಮಯವಾಗಿ ಪ್ರವರ್ತಿಸುತ್ತದೆಯೆಂದೂ, ಇವೆಲ್ಲ ವಿವರಗಳಿರುವುದರಿಂದ ಇದು ವೇದ ಸಮಾನವೆಂದೂ ತಿಳಿಸಲಾಗಿದೆ.

ನಾರದ, ಸನಕ, ಸನಂದನ, ಸನತ್ಕುಮಾರಾದಿ ದೇವರ್ಷಿಗಳು ಸತತವಾಗಿ ವಿಷ್ಣು ಭಗವಾನನ ಚರಣಾರವಿಂದಗಳನ್ನು ಸೇವಿಸುತ್ತಾ, ನಿರಂತರವೂ ಅಷ್ಟಾಕ್ಷರ ಮಂತ್ರ ಜಪತತ್ಪರರಾಗಿ ಭಗವದಾನಂದವನ್ನು ಹೊಂದಿದವ ರಾಗಿರುತ್ತಾರೆ. 'ತದ್ವಿಷ್ಣೋಃ ಪರಮಂ ಪದಮ್' ಎನ್ನುವ ದಿವ್ಯಮಂತ್ರವನ್ನು ನಿರಂತರವಾಗಿ ಅನುಸಂಧಾನ ಮಾಡುವ ಇವರು ನೆಲಸಿರುವ ವೈಕುಂಠ ಸನ್ನಿಧಿಯೆ ವಿಷ್ಣು ಭಗವಾನನ ಪರಮ ಪರಮಪದವಾಗಿರುವುದು.

ತನ್ನಲ್ಲಿ ಸಕಲ ಚರಾಚರ ಪ್ರಪಂಚವನ್ನು ಹೊಂದಿದ್ದು, ತಾನೇ ಸ್ವತಃ ಜಗತ್ತಿನ ವ್ಯವಹಾರಗಳೆಲ್ಲವನ್ನೂ ನಿರ್ವಹಿಸುವವನು ವಾಸುದೇವ. ಇದೇ ಈ ಶಬ್ದದ ನಿರ್ವಚನ.

ಇಂತಹ ವಾಸುದೇವನ ಸ್ವರೂಪವೂ ವಿಚಿತ್ರವಾದುದು. ಆದ್ಯಂತ ರಹಿತವಾಗಿಯೂ, ಅಶೇಷವಾಗಿಯೂ ಇರುವ ಈ ಜಗತ್ತನ್ನು ತನ್ನ ಅಧೀನದಲ್ಲಿರಿಸಿಕೊಂಡು, ತನ್ನ ಆಜ್ಞೆಯ ಪ್ರಕಾರ ಕಾಲವು ವರ್ತಿಸುವಂತೆ ಮಾಡುವ ಪ್ರಕೃತಿ ಸ್ವರೂಪನೇ ಆ ವಾಸುದೇವನು.

ಇಂತಹ ಭಗವಂತನನ್ನು ಶರಣು ಹೊಂದಿದ, ಅವನನ್ನು ಸದಾ ಸೇವಿಸುವವನಿಗೆ ನರಕದ ಭಯವೂ ಇಲ್ಲ, ಯಮಕಿಂಕರರ ಕಾಟವೂ ಇಲ್ಲ. ಶಾಶ್ವತಾನಂದವನ್ನು ನೀಡುವ ಪರಮಪದವು ಇಂತಹ ಶ್ರೀವೈಷ್ಣವರಿಗೆ ತಪ್ಪದೆ ಲಭಿಸುವುದು.

ಈ ರೀತಿಯ ವಿಷ್ಣುಪಾರಮ್ಯದ ವಿವರಗಳನ್ನು ನೀಡುವ ಈ ವಿಷ್ಣು ಪುರಾಣವು ವೇದವಾಗಿ, ಧರ್ಮಶಾಸ್ತ್ರವಾಗಿ, ಆಗಮಶಾಸ್ತ್ರವಾಗಿ, ಜ್ಯೋತಿಶ್ಶಾಸ್ತ್ರವಾಗಿ, ಮಹೇತಿಹಾಸ ಸಮುಚ್ಚಯವಾಗಿ, ಯೋಗಶಾಸ್ತ್ರವಾಗಿ, ಮಹಾಕಾವ್ಯವಾಗಿ ವಿರಾಜಿಸುತ್ತಾ, ಚೇತನರಿಗೆ ಮಾರ್ಗದರ್ಶಕವಾಗಿದೆ.

ಈ ರೀತಿಯಲ್ಲಿ ವಿಷ್ಣುಪಾರಮ್ಯ ಪ್ರತಿಪಾದಕವಾದ ಈ ಪುರಾಣವನ್ನು ಕುರಿತು ಯಾಮುನಾಚಾರ್ಯರು -

ತತ್ತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವ
ಭೋಗಾಪವರ್ಗ ತದುಪಾಯ
ಗತೀರುದಾರಃ
ಸಂದರ್ಶಯ ನ್ನಿರಮಿಮೀತ
ಪುರಾಣರತ್ನಂ
ತಸ್ಮೈ ನಮೊ ಮುನಿವರಾಯ
ಪರಾಶರಾಯ

ವಿಷ್ಣು ತತ್ತ್ವ ಪ್ರತಿಪಾದನೆಯನ್ನೇ ಅಲ್ಲದೆ ತತ್ತ್ವತ್ರಯ, ಅರ್ಥಪಂಚಕಗಳನ್ನು ಬೋಧಿಸುವುದರಿಂದ ಇದು ಪುರಾಣಗಳ ರತ್ನ ಎಂಬ ಹೆಸರು ಪಡೆದಿದೆ. ಇಷ್ಟೇ ಅಲ್ಲದೆ ಈ ಪುರಾಣವನ್ನು ಬ್ರಹ್ಮಾಂಡ, ವಾಯು, ಮಾರ್ಕಂಡೇಯ ಪುರಾಣಗಳು ಪ್ರಶಂಸಿಸಿವೆ.

**2. ಪದ್ಮಪುರಾಣ :** ಈ ಪುರಾಣದಲ್ಲಿ ಐದು ಖಂಡಗಳಿವೆ - 1. ಸೃಷ್ಟಿ ಖಂಡ - 72 ಅಧ್ಯಾಯ, 2. ಭೂಮಿ ಖಂಡ - 125 ಅಧ್ಯಾಯ, 3. ಸ್ವರ್ಗಖಂಡದಲ್ಲಿ -39 ಅಧ್ಯಾಯ, 4. ಪಾತಾಳ ಖಂಡದಲ್ಲಿ 113 ಅಧ್ಯಾಯ, 5. ಉತ್ತರ ಖಂಡದಲ್ಲಿ 272 ಅಧ್ಯಾಯಗಳಿದ್ದು ಒಟ್ಟು 621 ಅಧ್ಯಾಯಗಳಿವೆ. ಒಟ್ಟು 55000 ಶ್ಲೋಕಗಳು ಇದರಲ್ಲಿವೆ.

ಇದರಲ್ಲಿ ಗೌಡೀಯ (ಬಂಗಾಳ) ಮತ್ತು ದಾಕ್ಷಿಣಾತ್ಯ (ದಕ್ಷಿಣ ಭಾರತ) ಎನ್ನುವ ಎರಡು ಸಂಸ್ಕರಣ (ಅವತರಣಿಕೆ)ಗಳು. ಈ ಪುರಾಣದಲ್ಲಿ ಮೊದಲನೆಯದು ಅಚ್ಚಾಗದೆ ಇನ್ನೂ ಹಸ್ತಪ್ರತಿ ರೂಪದಲ್ಲಿದೆ. ದಾಕ್ಷಿಣಾತ್ಯಮಾತ್ರ ಅಚ್ಚಾಗಿ, ಪ್ರಚಲಿತವಾಗಿದೆ.

ಹಿರಣ್ಮಯ ಪದ್ಮದಿಂದ ಜಗತ್ತಿನ ಸೃಷ್ಟಿಯಾಗಿರುವುದರಿಂದ ಈ ಪುರಾಣವನ್ನು 'ಬ್ರಹ್ಮಜನ್ಮಪಾದ್ಮ' ಎಂಬ ಹೆಸರಿನಿಂದ ಕರೆಯಲಾಗುತ್ತದೆ.

ಈ ಪುರಾಣದ ಉತ್ತರ ಖಂಡದಲ್ಲಿ ಮಾತ್ರ ಶ್ರೀ ವೈಷ್ಣವ ಧರ್ಮವನ್ನು ವಿವರಿಸುವ ಭಾಗಗಳಿವೆ. ಇದರಲ್ಲಿ ಮೋಕ್ಷಮಾರ್ಗ, ವೈಷ್ಣವ ಸಂಪ್ರದಾಯದ ವಿಶೇಷಗಳು, ಅವಕ್ಕೆ ಸಂಬಂಧಪಟ್ಟ ಅನೇಕ ತಾತ್ತ್ವಿಕ ವಿಷಯಗಳನ್ನು ವಿವರಿಸಲಾಗಿದೆ. ಅಲ್ಲದೆ ಜೈನ, ಬೌದ್ಧ, ಪ್ರಚ್ಛನ್ನ ಬೌದ್ಧ, ಚಾರ್ವಾಕ ಮತಗಳನ್ನು ಖಂಡಿಸಲಾಗಿದೆ. ಇದರೊಂದಿಗೆ ವೈಷ್ಣವ ಕಥೆಗಳು ಹಾಗೂ ವೈಷ್ಣವ ಸ್ತೋತ್ರ ವಿಭಾಗಗಳೂ ಇವೆ. ಇದಲ್ಲದೆ ತೀರ್ಥ ಮಾಹಾತ್ಮ್ಯ, ಪರ್ವ ಮಹಾತ್ಮೆಗಳ ವಿವರಗಳೂ ಇವೆ. ಕಡೆಯಲ್ಲಿ ಇಹಲೋಕದಲ್ಲಿ ಸಕಲ ಭೋಗಗಳನ್ನೂ, ಪರಲೋಕದಲ್ಲಿ ವಿಷ್ಣುಸಾಯುಜ್ಯವನ್ನು ಪಡೆಯಲು ಯಾವ ಯಾವ ರೀತಿಯ ಭಗವತ್, ಭಾಗವತ ಸೇವೆಗಳನ್ನು ಮಾಡಬೇಕು ಎಂಬುದನ್ನೂ ತಿಳಿಸಲಾಗಿದೆ.

**3. ವರಾಹಪುರಾಣ :** ಇದರಲ್ಲಿ ಪೂರ್ವ ಭಾಗ, ಉತ್ತರ ಭಾಗ ಎನ್ನುವ ಎರಡು ಭಾಗಗಳಿದ್ದು, ಒಟ್ಟು 218 ಅಧ್ಯಾಯಗಳಿವೆ. ಇದರಲ್ಲಿ 24,000 ಶ್ಲೋಕಗಳಿವೆ. ಆದರೂ ಇದು ಅಪೂರ್ಣವಾದ ಗ್ರಂಥ. ಮೂಲ 10,000 ಶ್ಲೋಕಗಳು ಮಾತ್ರವಿದ್ದು, ಉಳಿದವುಗಳು

ಹೆಚ್ಚುವರಿಯಾಗಿ ಸೇರಿಸಲ್ಪಟ್ಟಿರುವವುಗಳೆಂದು ತಿಳಿಸಲಾಗಿದೆ. ಇದು ಮುಖ್ಯವಾಗಿ ವೈಷ್ಣವ ಪುರಾಣ. ಇದರಲ್ಲಿ ವಿಷ್ಣುಭಗವಾನನ ಮಹಾತ್ಮ್ಯವನ್ನು ವಿವರಿಸಲಾಗಿದೆ. ಭೂವರಾಹಾವತಾರದ ವಿಶೇಷಗಳೊಂದಿಗೆ ಕೂಡಿದ ಈ ವರಾಹಪುರಾಣವನ್ನೂ 24,000 ಗ್ರಂಥ (ಬಹುಶಃ ಶ್ಲೋಕಗಳಿರಬೇಕು) ವಾಗಿ ರಚಿಸಲಾಗಿದೆಯೆಂದು ಚತುರಾನನನು ನಾರದ ನೊಂದಿಗೆ ತಿಳಿಸುತ್ತಾನೆ. ಇದನ್ನು ಈ ಪುರಾಣದ 20ನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ಇದರಲ್ಲಿ ಚಾತುರ್ಮಾಸ ಮಾಹಾತ್ಮ್ಯ, ವಿಮಾನ ಮಾಹಾತ್ಮ್ಯೆ, ವೇಂಕಟಾಚಲ ಮಾಹಾತ್ಮ್ಯೆ - ಇತ್ಯಾದಿ ಅನೇಕ ವಿಶೇಷ ವಿಷಯಗಳನ್ನು ವಿವರಿಸಲಾಗಿದೆ.

**4. ನಾರದ ಪುರಾಣ :** ಈ ಪುರಾಣವು ಎರಡು ಭಾಗಗಳಲ್ಲಿದ್ದು, ಮೊದಲನೆಯದರಲ್ಲಿ 125 ಅಧ್ಯಾಯಗಳು, ಎರಡನೆಯದರಲ್ಲಿ 62 ಅಧ್ಯಾಯಗಳಿವೆ. ಒಟ್ಟು 25000 ಶ್ಲೋಕಗಳಿರಬೇಕಾಗಿದ್ದರೂ ದೊರೆತಿರುವುದು 18100 ಶ್ಲೋಕಗಳು ಮಾತ್ರ. ಇದರಲ್ಲಿ ಕಾರ್ತೀಕ ಮಾಸ ಮಾಹಾತ್ಮ್ಯೆ, ಯದುಗಿರಿ ಮಾಹಾತ್ಮ್ಯೆ, ಶ್ರೀಕೃಷ್ಣ ಮಹಾತ್ಮ್ಯ - ಇತ್ಯಾದಿಗಳ ವರ್ಣನೆಗಳಿವೆ.

**5. ಗರುಡ ಪುರಾಣ :** ಅಗ್ನಿಪುರಾಣದ ಮಾದರಿಯಲ್ಲಿರುವ ಈ ಪುರಾಣವು ವಿಶ್ವಕೋಶದಂತಿದ್ದು, ಅನೇಕ ವಿಷಯಗಳನ್ನು ಒಳಗೊಂಡಿದೆ. ವ್ಯಕ್ತಿಯ ಮರಣದ ನಂತರದ ಸಮಯದಲ್ಲಿ ಇದನ್ನು ಪಠಿಸಲಾಗುತ್ತದೆ. ಇದರಲ್ಲಿ ಶ್ರಾದ್ಧ ಕ್ರಿಯೆಗಳು, ವಾನಪ್ರಸ್ಥಾಶ್ರಮದ ಧರ್ಮಗಳು, ಅದರ ಪರಿಪಾಲನೆಯ ಫಲಗಳು, ಗಯಾದಿ ಪುಣ್ಯಕ್ಷೇತ್ರಗಳ ಮಾಹಾತ್ಮ್ಯ - ಇತ್ಯಾದಿಗಳ ವಿವರಗಳಿವೆ. ಇಷ್ಟೇ ಅಲ್ಲದೆ ಇದರಲ್ಲಿ ವಿಷ್ಣುಭಕ್ತಿವೈಶಿಷ್ಟ್ಯತೆ, ವಿಷ್ಣುವಿನ ಅರ್ಚನಾ ವಿಧಿ, ವಿಷ್ಣುವಿನ ಧ್ಯಾನದ ಮಹತ್ವ, ಅಷ್ಟಾಂಗಯೋಗ, ಗೀತಾರ್ಥಸಾರ, ವಿಷ್ಣುಧರ್ಮೋತ್ತರ, ವೇಂಕಟಾಚಲ ಮಹಾತ್ಮ್ಯೆ, ಸುಂದರ ಪುರ ಮಹಾತ್ಮ್ಯೆ, ಸ್ವರ್ಗಲೋಕದ ಪ್ರಶಸ್ತಿ - ಇತ್ಯಾದಿಗಳ ವಿವರಗಳಿವೆ.

**6. ಭಾಗವತ ಪುರಾಣ :** ಭಕ್ತಿಪ್ರಧಾನವಾದ ಶ್ರೀವೈಷ್ಣವ ಸಂಪ್ರದಾಯಕ್ಕೆ, ನಾರಾಯ ಣೋಪನಿಷತ್ತು, ಪಾಂಚರಾತ್ರಾಗಮಕ್ಕೆ ಸೇರಿದ ಸಾತ್ವತ ಸಂಹಿತೆ, ಪರಮ ಸಂಹಿತೆ, ಪರಮ ಪುರುಷ ಸಂಹಿತೆ, ಪುರುಷೋತ್ತಮ ಸಂಹಿತೆ, ಪರಮೇಶ್ವರ ಸಂಹಿತೆ - ಇತ್ಯಾದಿ ಆಗಮ ಶಾಸ್ತ್ರಗಳು, ನಾರದ ಭಕ್ತಿಸೂತ್ರಗಳು, ಶಾಂಡಿಲ್ಯ ಭಕ್ತಿಸೂತ್ರಗಳು, ಭಗವದ್ಗೀತಾ ಶಾಸ್ತ್ರ, ವಿಷ್ಣು ಭಾಗವತಾದಿ ಸಾತ್ತ್ವಿಕ ಪುರಾಣಗಳನ್ನು ಆಧಾರವಾಗಿ ಇರಿಸಿಕೊಂಡೇ ನಾಥಮುನಿ, ಯಾಮುನ, ಶ್ರೀರಾಮಾನುಜಾದಿ ಶ್ರೀವೈಷ್ಣವ ಮತ ಪ್ರವರ್ತಕರು ಶ್ರೀವೈಷ್ಣವ ಗ್ರಂಥಗಳನ್ನು ರಚಿಸಿ, ಖ್ಯಾತಿಗೊಂಡರು. ಇಂತಹ ಆಧಾರಗ್ರಂಥಗಳಲ್ಲಿ ಪ್ರಮುಖವಾದುದು ಭಾಗವತ ಮಹಾಪುರಾಣ.

ಇಂತಹ ಭಾಗವತ ಮಹಾಪುರಾಣಕ್ಕೆ 14 ನೇ ಶತಮಾನಕ್ಕೆ ಸೇರಿದ ಶ್ರೀವೈಷ್ಣವ ಪ್ರಮುಖರಾದ ರಾಘವಾಚಾರ್ಯ ಎನ್ನುವರೊಬ್ಬರು 'ಭಾಗವತ ಚರಿತ್ರ ಚಂದ್ರಿಕ' ಎನ್ನುವ ಹೆಸರಿನಲ್ಲಿ ವ್ಯಾಖ್ಯಾನವೊಂದನ್ನು ರಚಿಸಿದರು. ಇದರಲ್ಲಿ ಭಾಗವತ ಪುರಾಣವು 'ಸರ್ವವೇದ ಸಾರ' ಎಂದು ತಿಳಿಸಲಾಗಿದೆ. ಇದೇ ಈ ಪುರಾಣದ ವೈಶಿಷ್ಟ್ಯವೆಂದು ಹೇಳಬಹುದು.

ಇದು ವೈಷ್ಣವರಿಗೇ ಮೀಸಲಾದ ಗ್ರಂಥ., ವೈಷ್ಣವರ ದೇವತಾಶಾಸ್ತ್ರ ತತ್ತ್ವ, ಸಿದ್ಧಾಂತಗಳ ಅಪರೂಪ, ಅಮೂಲ್ಯ ಸಂಗ್ರಹಗಳು ಇದರಲ್ಲಿವೆ.

12 ಸ್ಕಂಧಗಳಿದ್ದು, ಅನೇಕ ಅಧ್ಯಾಯ ಗಳಿರುವ ಈ ಪುರಾಣದಲ್ಲಿ ಶ್ರೀಕೃಷ್ಣನ ಆರಾಧನೆ ಹಾಗೂ ಸ್ತೋತ್ರಗಳಿವೆ. ವಿಷ್ಣುಪುರಾಣಕ್ಕೆ ಹತ್ತಿರದ ಸಂಬಂಧವನ್ನು ಹೊಂದಿರುವ ಈ ಪುರಾಣದಲ್ಲಿ ಅನೇಕ ಆಖ್ಯಾಯಿಕೆಗಳಿವೆ. ಹೆಸರೇ ಹೇಳುವಂತೆ ಈ ಕೃತಿಯಲ್ಲಿ ಶ್ರೀಕೃಷ್ಣನ ಸಂಪೂರ್ಣ ಜೀವನ ಚರಿತ್ರೆ ಇದೆ.

ಈ ಕೃತಿಯಲ್ಲಿ ಸೂತನು ನಾರಾಯಣನ ಕಥಾ ಪ್ರಶಂಸೆ ಮಾಡುವಿಕೆ, ಭಗವಂತನ ಏಕವಿಂಶತಿ ಅವತಾರಗಳು, ಕುಂತೀದೇವಿ ಶ್ರೀಕೃಷ್ಣನನ್ನು ಸ್ತುತಿಸುವಿಕೆ, ಭೀಷ್ಮನು ಶ್ರೀಕೃಷ್ಣನನ್ನು ಸ್ತುತಿಸುವಿಕೆ, ಶ್ರೀಕೃಷ್ಣನು ದ್ವಾರಕಾನಗರವನ್ನು ಪ್ರವೇಶಿಸುವಿಕೆ, ಶ್ರೀಕೃಷ್ಣನನ್ನು ಅಂತಃಪುರ ಕಾಂತೆಯರು ನೋಡಿಕೊಳ್ಳುವಿಕೆ, ಪರೀಕ್ಷಿತ್ ಮಹಾರಾಜನು ಕಲಿಯನ್ನು ನಿಗ್ರಹಿಸಿ, ಧರ್ಮ ಪರಿಪಾಲನೆಯನ್ನು ಮಾಡುವಿಕೆ, ಶುಕನು ಪರೀಕ್ಷಿತ್ತನಿಗೆ ಮುಕ್ತಿಮಾರ್ಗವನ್ನು ಬೋಧಿಸುವಿಕೆ, ನಾರದನು ಪ್ರಪಂಚ ಪ್ರಕಾರಗಳಬಗ್ಗೆ ಬ್ರಹ್ಮನನ್ನು ಕೇಳುವಿಕೆ, ಬ್ರಹ್ಮನು ತಪಸ್ಸು ಮಾಡುವಿಕೆ ಹಾಗೂ ಆ ತಪಸ್ಸಿಗೆ ಮೆಚ್ಚಿ ನಾರಾಯಣನು ವರಗಳನ್ನು ನೀಡುವಿಕೆ, ಯಜ್ಞವರಾಹಾವತಾರದ ವರ್ಣನೆ, ಸನಕ-ಸನಂದಾದಿಗಳು ಶ್ರೀವೈಕುಂಠವನ್ನು ತಲುಪಿ ನಾರಾಯಣನನ್ನು ಪ್ರಾರ್ಥಿಸುವಿಕೆ, ಧ್ರುವೋಪಾಖ್ಯಾನ, ಪುರಂಜನೋಪಾಖ್ಯಾನ, ಭರತೋಪಾಖ್ಯಾನ, ನರಕಲೋಕ ವರ್ಣನೆ, ವಿಷ್ಣು ದೂತ - ಯಮದೂತರ ನಡುವೆ ನಡೆಯುವ ಸಂವಾದ, ಶ್ರೀಮನ್ನಾರಾಯಣ ಕವಚ, ಪ್ರಹ್ಲಾದ ಚರಿತ್ರೆ, ಗಜೇಂದ್ರ ಮೋಕ್ಷ, ಮಹಾವಿಷ್ಣುವು ಮೋಹಿನೀ ರೂಪವನ್ನು ಪಡೆಯುವಿಕೆ, ದೇವಾಸುರ ಯುದ್ಧ, ಅಂಬರೀಷೋಪಾಖ್ಯಾನ, ಶ್ರೀರಾಮ ಚರಿತ್ರೆ, ಶ್ರೀಕೃಷ್ಣಾವತಾರ ಘಟ್ಟ, ಶ್ರೀಕೃಷ್ಣ ಲೀಲೆಗಳು, ಕಾಳೀಯಮರ್ದನ, ಗೋಪಿಕಾ ವಸ್ತ್ರಾಪಹರಣ, ರಾಸಕ್ರೀಡಾಭಿವರ್ಣನೆ, ವೃಷಭಾಸುರ ಸಂಹಾರ, ಕುವಲಯಾಪೀಡನನ್ನು ಕೃಷ್ಣನು ವಧಿಸುವಿಕೆ, ಗೋವರ್ಧನೋದ್ಧರಣ, ರುಕ್ಮಿಣಿ ಕಲ್ಯಾಣ, ಕುಚೇಲೋಪಾಖ್ಯಾನ, ಶುಕನು ಪರೀಕ್ಷಿತನಿಗೆ ವಿಷ್ಣು ಸೇವಾ ಹಿರಿಮೆಯನ್ನು ತಿಳಿಸುವಿಕೆ - ಇತ್ಯಾದಿ ವಿಶೇಷ ವಿಷಯಗಳ ವಿವರಗಳಿವೆ.

ಹೀಗೆ ಸ್ಕಂದ ಪುರಾಣದಲ್ಲಿನ ವಿಷ್ಣು ಖಂಡವನ್ನು ವಿಪುಲವಾಗಿ ಈ ಪುರಾಣದಲ್ಲಿ ವಿವರಿಸಲಾಗಿದೆ. ಅಲ್ಲದೆ ಈ ಪುರಾಣದ ಮಹಾತ್ಮ್ಯೆಯನ್ನು ಪದ್ಮಪುರಾಣದಲ್ಲಿ ವರ್ಣಿಸಲಾಗಿದೆ.

ಇಂತಹ ಭಾಗವತ ಪುರಾಣವನ್ನು ಕನ್ನಡ, ತೆಲುಗು ಭಾಷೆಗಳಲ್ಲೆ ಅಲ್ಲದೆ ಭಾರತದ ಇತರೇ



ಭಾಷೆಗಳಿಗೂ ಅನುವಾದ ಮಾಡಲಾಗಿದೆ. ಕನ್ನಡದ ನಿತ್ಯಾತ್ಮಶುಕ, ತೆಲುಗಿನ ಪೋತನರಿಗೆ ಈ ಕಾವ್ಯ ತುಂಬಾ ಪ್ರಿಯವಾದುದು.

'ವಿಶ್ವವೇ ವಿಷ್ಣು - ವಿಷ್ಣುವಿಲ್ಲದೆ ಜಗತ್ತಿನಲ್ಲಿ ಬೇರೇನೂ ಇಲ್ಲ. ಈ ವಿಷ್ಣುವಿನಿಂದಲೇ ಧನವೃದ್ಧಿ, ಜಯ - ಇತ್ಯಾದಿಗಳು ಲಭಿಸುವುವು. ಶ್ರೀಕೃಷ್ಣನ ಹೆಸರನ್ನು ನಾಮ ಸಂಕೀರ್ತನೆಯಂತೆ ಜಪಿಸಬೇಕು. ಮನಸ್ಸಿನಲ್ಲಿ ಸದಾ ಕಾಲದಲ್ಲಿಯೂ ಶ್ರೀಕೃಷ್ಣ - ಶ್ರೀಕೃಷ್ಣ ಎನ್ನುವ ನಾರಾಯಣ ನಾಮಸ್ಮರಣೆಯನ್ನೆ ಮಾಡಬೇಕು. ಕಾಡಿನಲ್ಲಿದ್ದರೂ ಹರಿಕಥನವನ್ನು ಭಕ್ತಿ ಭಾವ ದಿಂದ ಹಾಡುತ್ತ, ಆತನ ಹೆಸರಿನೊಂದಿಗೆ ಆಡುತ್ತಾ ಇರಬೇಕು. ಈ ಪ್ರಪಂಚದಲ್ಲಿ ಹುಚ್ಚನಂತೆ ವರ್ತಿಸುತ್ತಾ, ಬಾಹ್ಯಲೋಕವನ್ನು ಮರೆತು, ಸರ್ವವೂ ವಿಷ್ಣುಮಯವೆಂದು ತಿಳಿಯಬೇಕು. ವಿಷ್ಣು ಭಗವಾನನಿಗೆ ಸಂಬಂಧಪಟ್ಟ ವಿಶೇಷಗಳನ್ನು ಬಲ್ಲವರಿಗೆ, ಆತನ ಪಾದಪದ್ಮಗಳನ್ನು ಸ್ಮರಿಸುವವರಿಗೆ, ಆ ದೇವದೇವನ ದಿವ್ಯಚರಿತ್ರೆಯನ್ನು ಆಲಿಸುವವರಿಗೆ ಮರಣ ಸಂಬಂಧದ ಮೋಹವು ಕಾಡುವುದಿಲ್ಲ' ಎಂದು ಈ ಭಕ್ತರು ವಿಷ್ಣು ಮಹಿಮೆಯನ್ನು ಹೊಗಳುವರು.

ಈ ರೀತಿಯಲ್ಲಿ ಈ ಪುರಾಣವು ಭಗವಾನ್ ಮಹಾವಿಷ್ಣುವಿನ ಸರ್ವಾಂತರ್ಯಾಮಿತ್ವವನ್ನು, ಆತನ ಸೃಷ್ಟಿ - ಸ್ಥಿತಿ - ಲಯ ಕಾರಕತ್ವವನ್ನು ಪ್ರತಿಪಾದಿಸುವ ಹರಿವಂಶಾವಳಿಯು ಶ್ರೀಕೃಷ್ಣ ತತ್ತ್ವವನ್ನು ನಿರೂಪಿಸುತ್ತದೆ. ಶಂಖ, ಚಕ್ರ, ಗದಾ, ಪದ್ಮ ಲಾಂಛನನಾದ ಮಹಾವಿಷ್ಣುವಿನ ತತ್ತ್ವಮಾಹಾತ್ಮ್ಯವನ್ನು ವಿಪುಲವಾಗಿ ಇದರಲ್ಲಿ ವಿಶದೀಕರಿಸಿದೆ.

**7. ಬ್ರಹ್ಮಾಂಡ ಪುರಾಣ :** ಈ ಪುರಾಣದಲ್ಲಿರುವ ಕೆಲವು ಶ್ಲೋಕಗಳು ವೈಷ್ಣವ ಮತದ ಛಾಯೆಯನ್ನು ಹೊಂದಿವೆ.

**8. ವಾಮನ ಪುರಾಣ :** ಇದು ಮೂಲತಃ ವೈಷ್ಣವ ಮತದ್ದಾಗಿದ್ದು, ಕಾಲಾಂತರದಲ್ಲಿ ಶೈವೋಪಾಸಕರು ಇದನ್ನು ಪುನರ್ರಚಿಸಿದ್ದಾರೆ.

**9. ಬ್ರಹ್ಮ ಪುರಾಣ :** ಇದು ವೈಷ್ಣವ ಪುರಾಣವಾದರೂ, ವಿಷ್ಣುತತ್ತ್ವಕ್ಕೆ ಸಂಬಂಧಪಟ್ಟ ವಿವರಗಳು ಬಹಳ ಕಡಿಮೆ. ವಿಷ್ಣುಕ್ಷೇತ್ರಗಳ ವಿವರಗಳು ಅಲ್ಲಲ್ಲಿವೆ.

**10. ಬ್ರಹ್ಮವೈವರ್ತ ಪುರಾಣ :** ಇದರಲ್ಲಿರುವ ನಾಲ್ಕು ಖಂಡಗಳಲ್ಲಿ ಒಂದು ಕೃಷ್ಣ ಜನ್ಮ ಖಂಡ, ಇದರಲ್ಲಿ ಕೃಷ್ಣ - ರಾಧೆಯರ ಆರಾಧನೆಯ ಚಿತ್ರಣಗಳಿವೆ.

**11. ಭವಿಷ್ಯ ಪುರಾಣ :** ಇದರಲ್ಲಿರುವ ಐದು ಪರ್ವಗಳಲ್ಲಿ ಒಂದು ವೈಷ್ಣವ ಪರ್ವವಿದೆ.

## ತಾಮಸ ಪುರಾಣಗಳು

ಇದರಲ್ಲಿನ ಮತ್ಸ್ಯ ಪುರಾಣದಲ್ಲಿ ಯಾವುದೇ ವಿಷ್ಣು ತತ್ತ್ವವೂ ಇಲ್ಲ. ಕೂರ್ಮ ಪುರಾಣವು ಪ್ರಾರಂಭದಲ್ಲಿ ವೈಷ್ಣವ ಸ್ವರೂಪವನ್ನು ಹೊಂದಿದ್ದು, ನಾಲ್ಕು ವಿಭಾಗಗಳಿವೆ. ನಾಲ್ಕನೆಯದಾದ ವೈಷ್ಣವೀ ಸಂಹಿತೆಯಲ್ಲಿ ಮೋಕ್ಷವನ್ನು ಪಡೆಯಲು ಅನುಸರಿಸಬೇಕಾದ ಕರ್ತವ್ಯಗಳ ಬಗ್ಗೆ ವಿವರಗಳಿವೆ. ಉಳಿದ ಪುರಾಣಗಳಲ್ಲಿ ವಿಷ್ಣುತತ್ವದ ಅಂಶಗಳಾವುವೂ ಇಲ್ಲ.

## ಉಪ ಪುರಾಣಗಳು

ಉಪಪುರಾಣಗಳಲ್ಲಿ ಧಾರ್ಮಿಕ ವಿಷಯಗಳ ಆಧಾರದ ಮೇಲೆ ವರ್ಗೀಕರಿಸಲ್ಪಟ್ಟವುಗಳಲ್ಲಿ ವೈಷ್ಣವ ಉಪಪುರಾಣಗಳ ಗುಂಪೂ ಒಂದು.

ಈ ವೈಷ್ಣವ ಉಪಪುರಾಣಗಳನ್ನು ಶ್ರೀವೈಷ್ಣವ ಆಳ್ವಾರಾಚಾರ್ಯರುಗಳು ಹೆಚ್ಚಾಗಿ ಪರಾಮರ್ಶೆಗಾಗಿ ಉಪಯೋಗಿಸಿಕೊಂಡಂತೆ ಕಾಣುವುದಿಲ್ಲ. ಬಹುಶಃ ಉಪ ಪುರಾಣಗಳು ವೇದಗಳಷ್ಟು, ಸಂಹಿತೆಗಳಷ್ಟು ನಂಬಿಕೆಗೆ ಅರ್ಹವಲ್ಲವೆಂಬ ಭಾವನೆಯೊ ಏನೊ! ಅಲ್ಲದೆ ಪುರಾಣಗಳು, ಉಪಪುರಾಣಗಳು ನಂತರದ ವರ್ಷಗಳಲ್ಲಿ ಬಹಳಷ್ಟು ಬದಲಾವಣೆಗೆ ಒಳಗಾದದ್ದರಿಂದ ಆಚಾರ್ಯರುಗಳೂ ಕೂಡ ಅವನ್ನು ವಿಶಿಷ್ಟಾದ್ವೈತತತ್ತ್ವದ ಪ್ರತಿಪಾದನೆಯಲ್ಲಿ ಹೆಚ್ಚಾಗಿ ಉಪಯೋಗಿಸಿಕೊಂಡಿಲ್ಲ. ಹೀಗಾಗಿ ಈ ಕೃತಿಗಳಲ್ಲಿ ವಿಷ್ಣು ತತ್ತ್ವ ಪ್ರತಿಪಾದನೆಯ ವಿವರಗಳನ್ನು ಮಾತ್ರ ಗಮನಿಸುವುದು ಉತ್ತಮ.

ಈ ಉಪಪುರಾಣಗಳಲ್ಲಿ ಮುಖ್ಯವಾದವುಗಳೆಂದರೆ - ವಿಷ್ಣುಧರ್ಮ, ವಿಷ್ಣುಧರ್ಮೋತ್ತರ, ನಾರಸಿಂಹ, ಬೃಹನ್ನಾರದೀಯ ಹಾಗೂ ಕ್ರಿಯಾಯೋಗಸಾರ - ಎಂಬವುಗಳು.

ವಿಷ್ಣುಧರ್ಮದಲ್ಲಿ ವೈಷ್ಣವ ತತ್ತ್ವಜ್ಞಾನ ಮತ್ತು ಅದರ ಮತಾಚಾರಗಳನ್ನು ವಿವರಿಸುವ ಒಂದು ಬೃಹದ್ಗ್ರಂಥ. ಬೌದ್ಧ, ಜೈನ ಇತ್ಯಾದಿ ನಾಸ್ತಿಕ ಧರ್ಮಗಳನ್ನು ಎದುರಿಸಿ, ಅವುಗಳ ವಿರುದ್ಧ ಹೋರಾಡುವುದಕ್ಕಾಗಿ ಈ ಪುರಾಣವು ರಚನೆಯಾಗಿರಬೇಕು.

ವಿಷ್ಣು ಧರ್ಮೋತ್ತರ ಉಪಪುರಾಣದಲ್ಲಿ ವೈಷ್ಣವ ಧರ್ಮ, ಪುಣ್ಯಕ್ಷೇತ್ರಗಳ ಮಹಿಮೆಯನ್ನು ವಿವರಿಸಲಾಗಿದೆ.

ಅತ್ಯಂತ ಪ್ರಾಚೀನವಾದ ನೃಸಿಂಹ ಉಪಪುರಾಣವು ಭಾಗವತ ಸಂಪ್ರದಾಯದ ಪಾಂಚರಾತ್ರರು ರಚಿಸಿದ ಗ್ರಂಥವಾಗಿದೆ. ಇದು ಪ್ರಮುಖವಾಗಿ ನರಸಿಂಹ ಹಾಗೂ ಆತನ ಪೂಜಾ ಕಲ್ಪವನ್ನು ಕುರಿತಾದ ಗ್ರಂಥ.

ಬೃಹನ್ನಾರದೀಯ ಉಪಪುರಾಣವು ಭಾಗವತ ಛಾಯೆಯ ಒಂದು ಪಾಂಚರಾತ್ರ ಕೃತಿ. ವಿಷ್ಣುಭಕ್ತಿಯಿಂದ ಮೋಕ್ಷಪ್ರಾಪ್ತಿ ಎಂಬುದನ್ನು ಇದು ವಿವರಿಸುತ್ತದೆ. ವಿಷ್ಣು ಭಕ್ತರ ಹಬ್ಬ ಹರಿದಿನಗಳು ಮತ್ತು ಅವರು ಮಾಡಬೇಕಾದ ಪೂಜಾವಿಧಿಗಳನ್ನು ಇದು ವಿವರಿಸುತ್ತದೆ. ವಿಷ್ಣು ಶಕ್ತಿಯೇ ಲಕ್ಷ್ಮಿ, ದುರ್ಗಾ ಇತ್ಯಾದಿ ಹೆಸರುಗಳಿಂದ ಪ್ರಖ್ಯಾತಳಾಗಿರುವಳೆಂದೂ, ತ್ರಿಗುಣಗಳ ಸಂಪರ್ಕದಿಂದ ಮಹಾವಿಷ್ಣುವು ಬೇರೆ ಬೇರೆ ರೂಪಗಳನ್ನು ಪಡೆದನೆಂದೂ ಇದು ತಿಳಿಸುತ್ತದೆ.

ಕ್ರಿಯಾ ಯೋಗ ಸಾರವು, ಭಾಗವತ ಸಂಪ್ರದಾಯವನ್ನು ಎತ್ತಿ ಹಿಡಿಯುತ್ತದೆ. ವಿಷ್ಣುವಿನ ಧ್ಯಾನ ಶಕ್ತಿಯ ಬಗ್ಗೆ ಒತ್ತು ನೀಡುತ್ತದೆ.

(ಆಧಾರಗಳಿಂದ)

# ವೈಭವದ ಬ್ರಹ್ಮೋತ್ಸವ

ವರದಿ - ಬಿ. ಎನ್. ಶ್ರೀನಿವಾಸನ್.

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ವಾರ್ಷಿಕ ಬ್ರಹ್ಮೋತ್ಸವಗಳು 7-10-2002 ರಿಂದ 15-10-2002 ರ ವರೆಗೆ ವೈಭವ, ಸಂಭ್ರಮ, ಭಕ್ತಿ, ಆದರಗಳಿಂದ ನಡೆದು ಸಂಪನ್ನವಾಯಿತು. ಕಲೌ ವೆಂಕಟ ನಾಯಕಃ ಎಂಬಂತೆ ಕಲಿಯುಗ ಪ್ರತ್ಯಕ್ಷ ದೈವವಾದ ಶ್ರೀಮನ್ನಾರಾಯಣನನ್ನು ಬ್ರಹ್ಮನು ಆರಾಧಿಸಿ ಮಾಡಿದ ಉತ್ಸವಗಳಾದುದರಿಂದಾಗಿ ಬ್ರಹ್ಮೋತ್ಸವ ಎಂದು ಹೆಸರಾಗಿ ಆಗಮೋಕ್ತವಾಗಿ ವಿವರಣೆ ಹೊಂದಿ, ಇತಿಹಾಸದಲ್ಲಿ, ಶಾಸನೋಕ್ತ, ಪುರಾಣೋಕ್ತ, ಜಾನಪದೋಕ್ತವಾಗಿ - ಒಟ್ಟಿನಲ್ಲಿ ಸರ್ವತ್ರ ಘೋಷಿಸಲಾಗಿ ತುಂಬುಜನವನ್ನು ತಿರುಮಲೆಗೆ ಬರಮಾಡಿಕೊಳ್ಳುವ ತಿಮ್ಮಪ್ಪನ ತಿರುನಾಳ್ಳು ಹತ್ತುದಿನದ ಉತ್ಸಾಹ ಸಂಭ್ರಮಗಳಿಗೆ ಎಡೆಮಾಡಿ ಭಕ್ತರನ್ನು ಯಾತ್ರಿಕರನ್ನು ಆಕರ್ಷಿಸಿ ಬರುವ ತಂದುಕೊಟ್ಟಿತೆನ್ನಬೇಕು.

ಇಂತಹ ಒಂದು ಅಗಾಧ ಜನಸಾ ಉತ್ಸವಕ್ಕೆ, ಮಾನವೋತ್ಸಾಹಕ್ಕೆ, ತಿರುಮಲ ತಿರುಪತಿ ದೇವಸ್ಥಾನಗಳು ಮೊದಲಿನಿಂದಲೇ ಸಿದ್ಧತೆಯನ್ನು ನಡೆಸಿ, ತಿರುಮಲೆಗೆ ನೆರಳಿ ಬರುವ ಯಾತ್ರಿಕರಿಗೆ ಕಲ್ಪಿಸಲಾಗುತ್ತಿರುವ ಸೌಲಭ್ಯಗಳನ್ನು ವಿವರಿಸುವ ಕರಪತ್ರಗಳನ್ನೂ ವಿತರಿಸಲಾಗಿತ್ತು, ಪತ್ರಿಕಾ ವರದಿಗಳನ್ನೂ, ತಕ್ಕ ಜಾಹೀರುಗಳನ್ನೂ ನೀಡಲಾಗಿದ್ದು, ತಕ್ಕ ಸಮಾಚಾರ ಕೇಂದ್ರಗಳನ್ನು ವಿವರಗಳನ್ನು ತಿಳಿಸುವಂತಹ ಸ್ವಯಂಸೇವಕ ಶ್ರೀವಾರಿ ಸೇವಾ ಪಡೆಯನ್ನು ನಿಯೋಜಿಸಲಾಗಿದ್ದಿತು. ಈ ಬಗ್ಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಮೊದಲೇ ಪತ್ರಿಕಾಗೋಷ್ಠಿಯನ್ನು ಕರೆದು ಏರ್ಪಾಡುಗಳ ವಿವರಗಳನ್ನು ತಿಳಿಸಿದ್ದೇ ಅಲ್ಲದ ಯಾತ್ರಿಕ ಬಂಧುಗಳಿಗೆ ತಕ್ಕ ಸೂಚನೆಗಳನ್ನೂ ಮೊದಲೇ ದೇಶದ ನಾನಾ ಭಾಗಗಳಲ್ಲಿ ಸೇರುವಂತೆ ಪ್ರಸಿದ್ಧಗೊಳಿಸಿದರು.

ಭಕ್ತರ ಸಂದಣಿಗೆ ತಕ್ಕಂತೆ ಹೆಚ್ಚಿನ ಪರಿಶುದ್ಧತೆಯ ಕ್ರಮಗಳನ್ನು ಕೈಗೆತ್ತಿಕೊಳ್ಳಲಾಗಿದ್ದಿತು. ತಿರುಪತಿಯಲ್ಲಿ ರೈಲ್ವೆ ನಿಲ್ದಾಣ ಬಸ್ ನಿಲ್ದಾಣಗಳಲ್ಲಿ ಯಾತ್ರಿಕರಿಗೆ ಮಾರ್ಗದರ್ಶನ ಮಾಡಲು ತಕ್ಕ ಸಿಬ್ಬಂದಿ ವ್ಯವಸ್ಥೆ ಮಾಡಲಾಗಿದ್ದಿತು. ಅಲಿಪಿರಿಯಿಂದ ಕಾಲು ಹಾದಿಯಲ್ಲಿ ಬೆಟ್ಟವನ್ನೇರುವ ಯಾತ್ರಿಕರಿಗೆ ಹೆಚ್ಚಿನ ರಕ್ಷಣೆ, ನೀರಿನ, ನೆರಳಿನ, ಅಲ್ಪೋಪಹಾರದ ವ್ಯವಸ್ಥೆ ಮಾಡಲಾಗಿದ್ದಿತು. ಹೋಟೆಲ್ ಓನರ್ಸ್ ಅಸೋಸಿಯೇಷನ್ ಪರವಾಗಿ ನಡೆದು ಹೋಗುವ ಯಾತ್ರಿಕರಿಗೆ ಉಚಿತ ಪುಳಿಯೋಗರೆ ಪೊಟ್ಟಣಗಳ ವಿತರಣೆಯು ಏರ್ಪಾಡಾಗಿದ್ದಿತು. ಇದನ್ನು ಹದಿನೈದನೆಯ ತಾರೀಖಿನವರೆಗೆ ನಡೆಸಿಕೊಂಡು ಬಂದರು. ಮೊದಲನೆಯದಿನ ಕಾರ್ಯಕ್ರಮವನ್ನು ತಿ.ತಿ.ದೇ. ತಿರುಪತಿಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಆರ್. ಅಪ್ಪಾರಾವ್ ಅವರು ಆರಂಭಿಸಿಕೊಟ್ಟರು. ತಾವೇ ಮುಂದೆ ನಿಂತು ಎರಡು ಸಾವಿರ ಪೊಟ್ಟಣಗಳ ವಿತರಣೆ ನೋಡಿದರು. ಶುದ್ಧವಾದ ನೀರಿನ ಪೊಟ್ಟಣಗಳ ಉಚಿತ ವಿತರಣೆಯ ಹೊಣೆಯನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದವರು ಕೈಗೆತ್ತಿಕೊಂಡಿದ್ದರು. ನೀರಿನ ಪೊಟ್ಟಣಗಳನ್ನು ತಿರುಮಲೆಯಲ್ಲಿ ಹದಿನೈದನೇ ತಾರೀಖು ಪರ್ಯಂತ ವಿತರಿಸಲಾಯಿತು. ಮೊದಲ ದಿನವೆ ಪ್ರಾತಃಕಾಲದಿಂದ ಸಂಜೆಯವರೆಗೂ ಈ ಕಾರ್ಯಕ್ರಮ ನಡೆಯಿತು. ಬ್ರಹ್ಮೋತ್ಸವಗಳಲ್ಲಿನ ಹೆಚ್ಚಿನ ಯಾತ್ರಿಕರಿಗೆಂದು ಆರ್.ಟಿ.ಸಿ. ಯವರು 60 ಅಧಿಕವಾದ ಬಸ್‌ಗಳನ್ನು ತಿರುಮಲೆ ತಿರುಪತಿಗಳ ನಡುವೆ ಭಕ್ತರ ಸಾಗಾಣಿಕೆಗೆ ಏರ್ಪಾಡು ಮಾಡಿದ್ದರು. ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಪಪ್ಪಾಲ ಚಲಪತಿರಾವ್ ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ





ಅವರುಗಳು ಹಸಿರು ಬಾವುಟ ತೋರಿಸಿ ಈ ಬಸ್‌ಗಳ ಕಾರವಾನ್ ಅನ್ನು ಆರಂಭಿಸಿಕೊಟ್ಟರು. ಹೋದ ಬ್ರಹ್ಮೋತ್ಸವದಲ್ಲಿ ಮಳೆಯ ಅಭಾವದಿಂದಾಗಿ ಫಲಪುಷ್ಪ ಪ್ರದರ್ಶನವನ್ನು ರದ್ದುಗೊಳಿಸಲಾಗಿದ್ದಿತು. ಈ ಬಾರಿ ಫಲಪುಷ್ಪ ಪ್ರದರ್ಶನ ಇತೋಧಿಕ ಉತ್ಸಾಹದಿಂದ ನಡೆಯಿತು ಎನ್ನಬೇಕು. ತಿ.ತಿ.ದೇ. ಅಧ್ಯಕ್ಷ ಶ್ರೀ ಪಿ. ಚಲಪತಿ ರಾವ್ ಅವರು ಈ ಪ್ರದರ್ಶನವನ್ನು ಉದ್ಘಾಟಿಸಿದರು. ತಿ.ತಿ.ದೇ. ಉದ್ಯಾನವನ ಇಲಾಖೆಯವರ ಸತತ ಪರಿಶ್ರಮಗಳು ಸಾರ್ಥಕವಾಗಿ, ಸರ್ವರೂ ನೋಡಿ ಸಂತೋಷಗೊಳ್ಳುವಂತೆ ಈ ಕಾರ್ಯಕ್ರಮ ನಡೆಯಿತು. ಭಗವಂತನ ಬ್ರಹ್ಮಾಂಡ ಮಯವಾದ ಈ ಉತ್ಸವದಲ್ಲಿ ಭಾಗವತ ಸೇವೆ ಮಾಡಿ ಆ ಮೂಲಕ ಶ್ರೀವಾರಿ ಸೇವೆಯನ್ನು ಮಾಡಿದವರು ಸಾವಿರಕ್ಕೂ ಹೆಚ್ಚಿದ ಮಂದಿ. ಮೊದಲನೆಯ ದಿನ ಶ್ರೀವಾರಿ ಸೇವಕರನ್ನು ಉದ್ದೇಶಿಸಿ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್.ಎಸ್. ಬ್ರಹ್ಮಾನಂದ, ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕ ಡಾ|| ಮೇಡಸಾನಿ ಮೋಹನ್ ಮೊದಲಾದವರು ಮಾತನಾಡಿದರು. ಶ್ರೀವಾರಿ ಸೇವೆಯ ಸುಳಿವು ಸೂಕ್ಷ್ಮಗಳನ್ನು, ಸ್ವಯಂಸೇವಕರಿಗೆ ಸಲಹೆ ಸೂಚನೆಗಳನ್ನು, ನೀಡಿ ಅವರ ಪ್ರಯತ್ನ ಸಫಲವಾಗುವಲ್ಲಿ ಸೂಕ್ತ ನಿರ್ದೇಶನ ನೀಡಿದರು.

ಬ್ರಹ್ಮೋತ್ಸವಗಳಲ್ಲಿ ಶಾಂತಿ ಭದ್ರತೆಗಳ ಸಂರಕ್ಷಣೆಯ ದೃಷ್ಟಿಯಿಂದ ಬೇರೆ ಬೇರೆ ಕಡೆಯಿಂದ ಹೆಚ್ಚಿನ ಪೋಲೀಸು ಸಿಬ್ಬಂದಿಯನ್ನು ಕರೆಯಲಾಗಿತ್ತು. ಚಿತ್ತೂರು ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್ ಶ್ರೀರಾಮ ನಾರಾಯಣ ಅವರು ಪೋಲೀಸರ ಕಾರ್ಯಪೂರ್ವಸಿದ್ಧತಾ ಸಮಾವೇಶದಲ್ಲಿ ಮಾತನಾಡುತ್ತ ಮಾಧವ ಸೇವೆಯನ್ನು ಮಾನವಸೇವೆ ಮಾಡುವ ಮೂಲಕವೇ ಮಾಡಬೇಕೇ ಹೊರತು ಬೇರಿಲ್ಲವೆಂದು ನುಡಿಯುತ್ತ, ಭಕ್ತಯಾತ್ರಿಕರ ಸ್ನೇಹಿತರಾಗಿ ನೆರವಿಗರಾಗಿ, ನಡೆದುಕೊಳ್ಳಬೇಕೆಂದೂ ಅದೇ ಹೊತ್ತಿನಲ್ಲಿ ಸುರಕ್ಷತೆಯ ಬಗ್ಗೆಯೂ ಒತ್ತು ನೀಡುತ್ತ ಹೆಸರು ಪಡೆದು ಹಿಂದಿರುಗುವಂತಿರಬೇಕು ಎಂದು ಸೂಚನೆ ನೀಡಿದರು.

ಧರ್ಮಪ್ರಚಾರ ಪರಿಷತ್‌ನವರು ತಿರುಮಲೆಯ ಆಸ್ಥಾನ ಮಂಟಪದಲ್ಲಿ ಬ್ರಹ್ಮೋತ್ಸವಗಳ ಅಷ್ಟೂ ದಿನವೂ ಬೆಳಗ್ಗೆ ಆರು ಗಂಟೆಯಿಂದ ಸಂಜೆ 9 ಗಂಟೆಯವರೆಗೆ ನಿರಂತರವಾಗಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು. ಜೊತೆಗೇ ತಿರುಮಲೆಯ ಬಸ್‌ನಿಲ್ದಾಣದ ಸಮೀಪದ ಯಾತ್ರಿಕ ಸೌಲಭ್ಯ ಸಮುದಾಯ ಭವನದಲ್ಲಿ ನಿತ್ಯವೂ ಸಂಜೆ ಹರಿಕಥೆಯ ಏರ್ಪಾಡಾಗಿದ್ದಿತು. ತಿರುಪತಿಯಲ್ಲಿನ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಹಾಗೂ ಮಹತಿ ಸಭಾಂಗಣದಲ್ಲಿಯೂ ದಿನವೂ ಬೆಳಗ್ಗೆ ಸಂಜೆಗಳಲ್ಲಿ ಸಂಕೀರ್ತನೆ, ನೃತ್ಯ ಕಾರ್ಯಕ್ರಮಗಳೂ, ತಿರುಪತಿಯ ಮೂರನೇ ಸತ್ರದಲ್ಲಿ ದಿನವೂ ಸಂಜೆಯ ಹೊತ್ತಿನಲ್ಲಿ ಹರಿಕಥೆಗಳೂ ಏರ್ಪಾಡಾಗಿದ್ದವು. ಈ ಕಾರ್ಯಕ್ರಮಗಳಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್, ದಾಸಸಾಹಿತ್ಯ ಪ್ರಾಜೆಕ್ಟ್, ದಿವ್ಯಪ್ರಬಂಧ ಪ್ರಾಜೆಕ್ಟ್, ತಿ.ತಿ.ದೇ. ಸಂಗೀತ ನೃತ್ಯಕಲಾಶಾಲೆ ಮೊದಲಾದವು ಸಕ್ರಿಯವಾಗಿ ಪಾಲುಗೊಂಡಿದ್ದವು.

## ಅಂಕುರಾರ್ಪಣ

6-10-2002 ರಂದು ಭಾನುವಾರ ರಾತ್ರಿ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳಿಗೆ ಅಂಕುರಾರ್ಪಣೆಯಾಯಿತು. ಸ್ವಾಮಿ ಆಲಯದಿಂದ ವಿಷ್ವಕ್ಸೇನರು ಹೊರಬಂದು ಆಲಯದ ನೈಋತ್ಯದ ಮೂಲೆಯ ವಸಂತಮಂಟಪದಿಂದ ಮೃತ್ಸಂಗ್ರಹಣ ಮಾಡಿಕೊಂಡು ಬಂದು ಯಾಗಶಾಲೆಯಲ್ಲಿ ಸ್ಥಾಪಿಸಿದ ನವಕುಂಭಗಳಲ್ಲಿಟ್ಟು ಅಂಕುರಸ್ಥಾಪನೆ ಮಾಡಲಾಯಿತು. ವಿಷ್ವಕ್ಸೇನರು ಆಲಯದ ನಾಲ್ಕೂ ಮಾಡ ಬೀದಿಗಳಲ್ಲಿ ಬಂದು ದಿಗ್ದೇವತೆಗಳನ್ನೂ, ಸರ್ವ ದೇವತೆಗಳನ್ನೂ ಸ್ವಾಮಿ ಬ್ರಹ್ಮೋತ್ಸವಕ್ಕೆ ಆಹ್ವಾನಿಸಿದರು. ಸ್ವಾಮಿ ಸೇನಾಪತಿಯಾದ ವಿಷ್ವಕ್ಸೇನರ ಮೆರವಣಿಗೆಯನ್ನು ಉತ್ಸವ ಪರ್ಯಟನೆಯ ವ್ಯವಸ್ಥೆಯ ಮೇಲುಸ್ತುವಾರಿ ಕ್ರಮವೆಂದೂ ವರ್ಣಿಸಲಾಗಿದೆ.

ಅಂದು ಬೆಳಗ್ಗೆಯೇ ಆಸ್ಥಾನ ಮಂಟಪದಲ್ಲಿ ಧಾರ್ಮಿಕ ಕಾರ್ಯಕ್ರಮಗಳು ಆರಂಭವಾದವು. ತಿರುಮಲೆಯಲ್ಲಿ ವೇದಪಾರಾಯಣ ನಡೆದಾದ ಮೇಲೆ ವಿದ್ವತ್ಕವಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯ ಅವರು ಗೀತಾ ಪಾರಾಯಣ ಮಾಡಿದರು. ಹಂಪೆಯ ಶ್ರೀಮತಿ ಗಾಯತ್ರಿ ನಾವಡ ಅವರು ದಾಸಸಾಹಿತ್ಯದ ಹಿರಿಮೆಯ ಬಗ್ಗೆ ಉಪನ್ಯಾಸ ನೀಡಿದರು. ಆನಂತರ ಧಾರ್ಮಿಕ ಉಪನ್ಯಾಸ, ವಿಷ್ಣುಸಹಸ್ರನಾಮ ಪಾರಾಯಣಗಳ ನಂತರ ತಿರುಪತಿಯ ಶ್ರೀ ಶ್ರೀ ಸ್ವಸ್ವರೂಪಾನಂದ ಸ್ವಾಮಿಜೀ ಅವರು ಮಹಾತ್ಮರ ಸಂದೇಶ ಭಾಗದಲ್ಲಿ ಭಾಷಣ ಮಾಡಿದರು. ಶ್ರೀ ಪ್ರಭಾಕರ ಶರ್ಮ ಅವರು ಪುರಾಣ ಪ್ರವಚನ ಮಾಡಿದರು. ಹರಿಕಥೆ ನಡೆಯಿತು. ಉಜ್ಜಯಿನಿಯ ಶ್ರೀ ಶ್ರೀ ರಂಗನಾಥಾಚಾರ್ಯ ಸ್ವಾಮಿಜೀ ಅವರು ತುಲಸೀ ರಾಮಾಯಣದ ಹಿರಿಮೆಯನ್ನು ಹೇಳಿದರು. ನಂತರ ಅನ್ನಮಾಚಾರ್ಯ ಸಂಕೀರ್ತನೆ, ಹರಿಕಥೆ ಮೊದಲಾದವು ನಡೆದವು.

## ಧ್ವಜಾರೋಹಣ

7-10-2002 ರಂದು ಬ್ರಹ್ಮೋತ್ಸವದ ಧ್ವಜಾರೋಹಣ. ತಿರುಮಲೆಯ ಆಲಯದ ಒಳ ಅಂಗಳದ ಧ್ವಜಸ್ತಂಭ ಮಂಟಪದಲ್ಲಿ ಚಿನ್ನದ ಮುಲಾಮಿನ ತಗಡು ಹೊದಿಸಿದ ಧ್ವಜಸ್ತಂಭವನ್ನು ಅಲಂಕರಿಸಿ ವಿಶೇಷ ಪೂಜೆ ಪುರಸ್ಕಾರಗಳಿಂದ ಆರಾಧಿಸಿ, ಅದರ ಮೇಲೆ ಗರುಡಧ್ವಜವನ್ನು ಹಾರಾಡಿಸಲಾಯಿತು. ಉತ್ಸವ ಮೂರ್ತಿ ಹಾಗೂ ಉಭಯ ದೇವಿಯರ ಸನ್ನಿಧಿಯಲ್ಲಿ ಈ ಕಾರ್ಯಕ್ರಮ ನಡೆದಾದ ಮೇಲೆ ಅವರನ್ನು ತಿರುಮಲರಾಯ ಮಂಟಪದಲ್ಲಿ ಸ್ವಾಮಿಯ ಆಸ್ಥಾನವನ್ನು

ಆಗಮೋಕ್ತವಾಗಿ ನಿರ್ವಹಿಸಲಾಯಿತು. ನಂತರ ತಿರುವಾಭರಣಗಳಿಂದ ಅಲಂಕರಿಸಿ ವಾಹನ ಮಂಟಪದ ವರೆಗೆ ಕರೆತಂದು ದೊಡ್ಡ ಶೇಷವಾಹನದಲ್ಲಿ ನಾಲ್ಕು ಮಾಡವೀಧಿಗಳಲ್ಲಿ ಮೆರವಣಿಗೆಯಲ್ಲಿ ಕರೆತರಲಾಯಿತು. ಮೊದಲನೆಯ ದಿನದ ರಾತ್ರಿಯಲ್ಲಿ ಶೇಷವಾಹನನಾದ ಶ್ರೀ ಭೂ ಸಹಿತ ಮಲೆಯಪ್ಪಸ್ವಾಮಿಯನ್ನು ಊರಿನವರೆಲ್ಲ ಘೇ ಉಘೇ ಎಂದು ಜಯ ಜಯಕಾರ ಮಾಡುತ್ತ ರಥಬೀದಿಯ ಇಕ್ಕೆಲದಲ್ಲಿಯೂ ತುಂಬಿ ನಿಂತು ನೋಡಿ ಆನಂದಿಸಿದರು. ದಾಸಸಾಹಿತ್ಯ ಪ್ರಾಜೆಕ್ಟ್‌ಗೆ ಸದಸ್ಯತ್ವ ಪಡೆದ ನೂರಾರು ಭಜನ ಮಂಡಳಿಗಳುಂಟು. ಅಂತಹ ಭಜನ ಮಂಡಳಿಗಳ ಆಯ್ದ ಸದಸ್ಯರು ತಿರುಮಲೆಗೆ ಬ್ರಹ್ಮೋತ್ಸವ ಕಾಲದಲ್ಲಿ ಬಂದು ಒಂದೆರಡು ದಿನ ಸ್ವಾಮಿ ಸೇವೆಯಲ್ಲಿ ಭಾಗವಹಿಸುವ ಪರಂಪರೆಯಿದೆ. ಹೀಗೆ ಬಂದ ಮಂಡಳಿಗಳವರು ದಿನವೂ ಪ್ರಾತಃಕಾಲ ನಗರ ಸಂಕೀರ್ತನೆಯಲ್ಲಿ ಭಾಗವಹಿಸಿ, ಸ್ವಾಮಿಯ ಮೆರವಣಿಗೆಯಲ್ಲಿ ಬೆಳಗ್ಗೆ ಸಂಜೆ ಭಜನಕೀರ್ತನೆ ಪಾಡುತ್ತ ಭಾಗವಹಿಸುವುದು ನಡೆಯಿತು.

ವರದಿಯ ಮುಂದೆ ಹೋಗುವ ಮೊದಲು ಗುರುತಿಸಬೇಕಾದದ್ದು ಬ್ರಹ್ಮೋತ್ಸವಕಾಲದ ವಿದ್ಯುದ್ದೀಪಾಲಂಕಾರ; ನೇತ್ರರಂಜಕ, ಧರ್ಮ ವ್ಯಂಜಕ, ಪುರಾಣ ಪರಿಚಯಾತ್ಮಕ, ವಿದ್ಯುದ್ದೀತಾತ್ಮಕ ಅಲಂಕಾರ. ಗೀತೋಪದೇಶ, ಶ್ರೀನಿವಾಸ ಕಲ್ಯಾಣ, ಸಮುದ್ರ ಮಥನಗಳ ಜೊತೆಗೇ ಸ್ವಾಮಿ ಹಾಗೂ ಅಮ್ಮನವರ ವಿವಿಧ ರೀತಿಯ ಅಲಂಕಾರಿಕ ವಿನ್ಯಾಸಗಳಿಂದ ತುಂಬಿ ತಿರುಮಲೆಯನ್ನು ಬಹುಕಾಲದಿಂದ ಕಂಡವರೂ ಹೊಸದೆಂಬಂತೆ ಕಾಣುವಷ್ಟು ಸುಂದರಗೊಳಿಸ ಲಾಗಿದ್ದಿತು. ಹಾಗಾಗಿ ಮಧ್ಯಾಹ್ನ ಬಂದವರೇ ಏನು; ಬೆಳಗ್ಗೆ ಬಂದವರೂ ಸಂಜೆ ಎರಡು ಘಳಿಗೆ ಇದ್ದು ರಾತ್ರಿಯ ಉತ್ಸವವನ್ನೂ ನೋಡಿ ಹೊರಡುವ ಬಯಕೆಯಿಂದ ನಿಲ್ಲುವಂತಾಯಿತು.

ಹೀಗೆ ನಿಂತಪರಿಗಾಗಿಯೇ ಧರ್ಮದ, ಸಾಹಿತ್ಯದ, ಮಾನವೀಯತೆಯ ಮೌಲ್ಯಗಳನ್ನು ರಂಜನೀಯವಾಗಿ, ಸರಳವಾಗಿ, ಸೂತ್ರ ದೋಪಾದಿಯಲ್ಲಿ ತಿಳಿಸಲು ಆಸ್ಥಾನ ಮಂಟಪದ ಕಾರ್ಯಕ್ರಮಗಳು ವ್ಯವಸ್ಥಿತವಾಗಿದ್ದವು. ಧರ್ಮಪ್ರಚಾರ ಪರಿಷತ್ ವತಿಯಿಂದ ವೇದಪಾರಾಯಣವಾದ ಮೇಲೆ ಕವಿ ಶ್ರೀ ಕೊಂಡಮಾಚಾರ್ಯರಿಂದ ಗೀತಾಪಾರಾಯಣ ನಡೆಯಿತು. ತಿರುಮಲ ಕುಲಕರ್ಣಿಯವರು ದಾಸಸಾಹಿತ್ಯದ ಸಾರ್ವಕಾಲಿಕ ಸಮುಚಿತತೆಯ ಬಗ್ಗೆ ಸೋದಾಹರಣವಾಗಿ ವಿವರಿಸಿದರು. ಹೈದರಾಬಾದಿನ ಶ್ರೀಮತಿ ವೇದವತಿ ಪ್ರಭಾಕರ ಅವರು ತಮ್ಮ ಸಂಕೀರ್ತನ ಸೇವೆಯಿಂದ ಸಭೆಯನ್ನು ಸರ್ವೋತ್ತಮನ ಸ್ತುತಿಯಲ್ಲಿ ಸಂತಸಪಡುವಂತೆ ಮಾಡಿದರು. ಶ್ರೀ ಪ್ರಭಾಕರ ಶರ್ಮರು ಸುಂದರಕಾಂಡ ಪ್ರವಚನದಲ್ಲಿ ಅದರ ಸೌಂದರ್ಯವನ್ನು ವಿಸ್ತಾರವಾಗಿ ತಿಳಿಸಿದರು. ಹೈದರಾಬಾದಿನ ಸ್ವಾಮಿ ಸರ್ವೇಶಾನಂದರು ಸ್ವಾಮಿಯ ಅನುಗ್ರಹದ ಅಪರಂಪಾರತೆಯನ್ನು ವಿವರಿಸಿದರು. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರೂ, ವಿಜಯವಾಡದ ಶ್ರೀ ಪಿ. ಸೂರ್ಯರಾವ್ ಹಾಗೂ ಶ್ರೀ ಕೊಕ್ಕೊಂಡ ಶರ್ಮರುಗಳು ತಮ್ಮ ಗೀತಗಳಿಂದ ಸಭೆಯನ್ನು ಕಳೆಕಟ್ಟಿದರು. ಈ ಧಾರ್ಮಿಕ ಕಾರ್ಯಕ್ರಮ ಗಳಲ್ಲಿ ಭಾಗವಹಿಸಿ ಪ್ರಯೋಜನ ಪಡೆಯಬೇಕೆಂದು ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್.ಎಸ್. ಬ್ರಹ್ಮಾನಂದ ಕರೆ ನೀಡಿದರು.

ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ 14 ವರ್ಷದ ಚಿ|| ಬಾಲತ್ರಿಪುರಸುಂದರಿ ಅನ್ನಮಾಚಾರ್ಯರ ಕೃತಿ ಗಳಿಗೆ ನೃತ್ಯರೂಪಕೊಟ್ಟದ್ದು ಎಲ್ಲರನ್ನೂ ಮಂತ್ರ ಮುಗ್ಧರನ್ನಾಗಿ ಮಾಡಿತು. ಮಹತಿ ಸಭಾಂಗಣದಲ್ಲಿ ಶ್ರೀ ತುಲಸಿ ಅಶೋಕ್ ಕುಮಾರ್ ಸಂಗೀತ ನಡೆಯಿತು. ಮೂರನೇ ಸತ್ರದಲ್ಲಿ ಹರಿಕಥೆ ನಡೆಯಿತು.

## ದ್ವಿತೀಯ ದಿನ

8-10-2002 ರಂದು ಮಂಗಳವಾರ. ಅಂದು ಬೆಳಗ್ಗೆ ಶ್ರೀ ಮಲೆಯಪ್ಪಸ್ವಾಮಿ ಒಬ್ಬನೇ ಐದು ಹೆಡೆಗಳ ಚಿಕ್ಕ ಶೇಷವಾಹನದಲ್ಲಿ ಊರಮೆರವಣಿಗೆಯಲ್ಲಿ ಬಂದರು. ಬೆಳಗ್ಗೆ 9 ಗಂಟೆಗೆ ಆಲಯದಿಂದ ಹೊರಬಂದ ಸ್ವಾಮಿಯು ಬೆಳಗ್ಗೆ 11 ಗಂಟೆಯ ಹೊತ್ತಿಗೆ ನಾಲ್ಕು





ಮಾಡ ವೀಧಿಗಳನ್ನು ಸುತ್ತಿ ನೆರೆದ ಭಕ್ತರನ್ನು ಅನುಗ್ರಹಿಸುತ್ತ ನಡೆದು ಬೆಳಗ್ಗೆ ಹನ್ನೊಂದು ಗಂಟೆಗೆ ಆಲಯಕ್ಕೆ ಹಿಂದಿರುಗಿದರು. ಬ್ರಹ್ಮೋತ್ಸವದ ಅವಧಿಯಲ್ಲಿ ನಡೆಯುವ ಉತ್ಸವ ಮೂರ್ತಿಯ ನಾಲ್ಕು ತಿರುಮಂಜನಗಳಲ್ಲಿ ಮೊದಲನೆಯದು ಆಲಯದ ಶ್ರೀರಂಗನಾಯಕ ಮಂಟಪದಲ್ಲಿ ನಡೆಯಿತು. (ಎರಡು ಮೂರನೆಯ ತಿರುಮಂಜನಗಳೂ ಇಲ್ಲಿಯೇ ನಡೆಯುತ್ತವೆ. ಕಡೆಯದು ಮಾತ್ರ ಅವಭೃಥ ಸ್ನಾನವೆಂದು ಕರೆಯುವುದಾಗಿ, ಧ್ವಜಾರೋಹಣದಂದು ಶ್ರೀ ವರಾಹಸ್ವಾಮಿ ಆಲಯದಲ್ಲಿ ನಡೆಯುತ್ತದೆ.) ಹರಿದ್ರ, ಶ್ರೀಗಂಧ, ಮೊದಲಾದ ಮಂಗಳ ದ್ರವ್ಯಗಳ ಮಿಶ್ರಣದಿಂದ ಶ್ರೀ ಮಲೆಯಪ್ಪಸ್ವಾಮಿಯನ್ನೂ ಶ್ರೀದೇವಿ ಭೂದೇವಿಯರನ್ನೂ ಮಜ್ಜನಗೈಸಿ ನಂತರ ಹೊಸದಾಗಿ ವಸ್ತ್ರಾಲಂಕಾರ ಆಭರಣಾಲಂಕಾರಗಳನ್ನು ನೀಡುತ್ತ ವಿಶೇಷ ಪೂಜೆ ಸಮರ್ಪಿಸಲಾಯಿತು. ಆನಂತರ ಊಂಜಲ್ ಸೇವೆ ಸಮರ್ಪಣೆಯಾಗುವ ಹೊತ್ತಿಗೆ ಸಂಜೆಯಾಗುತ್ತದೆ. ಅಲ್ಲಿಸ್ವಾಮಿ ಪರಮ ಹಂಸನಾಗಿ ವೀಣಾಪಾಣಿಯಾಗಿ ಹಂಸವಾಹನದಲ್ಲಿ ಮೆರವಣಿಗೆ ಬರುತ್ತಾನೆ. ಪುರುಷ ಸರಸ್ವತಿ ಎಂದರೂ ಆತನೆ. ಸರಸ್ವತಿ ಎಂದರೂ ಆತನೇ. ಆತನೇ ತಿಳಿವೂ, ತಿಳಿದವನೂ, ತಿಳಿಸಿ ಕೊಡುವವನೂ, ಆಗಿದ್ದಾನೆ ಎಂಬುದರ ಪ್ರತೀಕವಾಗಿ ಹೊರಬಂದ ಈ ಪರಮ ಹಂಸ ರೂಪವನ್ನು ಜನ ನೋಡಿ ಆನಂದಿಸಿ ಭಕ್ತಿಯಿಂದ ಕೈಮುಗಿದು, ತೃಪ್ತರಾದರು.

ಪತ್ರಿಕಾ ಸಂದರ್ಶನ ನೀಡಿದ ತಿರುಮಲೆಯ ಸಂಯುಕ್ತಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ಬಾಲಸುಬ್ರಹ್ಮಣ್ಯಂ ತಾವು ಬ್ರಹ್ಮೋತ್ಸವಗಳ ಪೂರ್ವಭಾವಿಯಾಗಿ ನಡೆಸಿದ ತಿರುಮಲೆಯ ವಿವಿಧ ಸ್ಥಳಗಳ ತನಿಖೆಯ ಬಗ್ಗೆ ತಿಳಿಸಿದರು. ಹೆಚ್ಚುತ್ತಿರುವ ಸಂದರ್ಶನಕರ ಸಂಖ್ಯೆಗೆ ತಕ್ಕಂತೆ ಸೇವಾ ಸೌಲಭ್ಯವನ್ನು ಹೆಚ್ಚುಗೊಳಿಸುವ ಉದ್ದೇಶದಿಂದ ಬಯೋಮೆಟ್ರಿಕ್ ವ್ಯವಸ್ಥೆಯನ್ನು ಜಿಲ್ಲಾಕೇಂದ್ರಗಳಲ್ಲಿ ಆರಂಭಿಸಲಿರುವುದಾಗಿಯೂ, ಪ್ರಯೋಗಾತ್ಮಕವಾಗಿ ಚೆನ್ನೈ, ವಿಶಾಖ ಪಟ್ಟಣಗಳಲ್ಲಿ ಆರಂಭಿಸಿರುವುದಾಗಿಯೂ ತಿಳಿಸಿದರು. ಈ ವಿಧಾನದಿಂದ ಜಿಲ್ಲಾ ಕೇಂದ್ರಗಳಲ್ಲಿ ಮುಂದೆ ಮುಂದೆ ಭಕ್ತರು ತಮ್ಮ ಬೆರಳಗುರುತು ನೀಡಿ ಸಾಧಾರಣ ದರ್ಶನ ಸಮಯವನ್ನು ನಿರ್ಧರಿಸಿಕೊಂಡು ಸಮಯಕ್ಕೆ ಸರಿಯಾಗಿ ಆಲಯವನ್ನು ಸೇರಲು ಅನುಕೂಲವೆಂದು ವಿವರಿಸಿದರು. ಸ್ವಾಮಿಯ ದರ್ಶನಕ್ಕೆ ಬರುವಾಗ ತಿರುಪತಿಯಲ್ಲಿಯೇ ಸುದರ್ಶನ ಟೋಕನ್‌ಗಳನ್ನು ಕಟ್ಟಿಸಿಕೊಂಡು ಸಮಯಕ್ಕೆ ಸರಿಯಾಗಿ ಮೇಲಕ್ಕೆ ಬರಬೇಕು ಎಂದರು. ಬ್ರಹ್ಮೋತ್ಸವದಲ್ಲಿ ಹೆಚ್ಚು ಮಂದಿಗೆ ದರ್ಶನ ಕಲ್ಪಿಸಬೇಕೆಂಬ ಉದ್ದೇಶದಿಂದ ತೋಮಾಲಸೇವೆ ಅರ್ಚನೆ ಏಕಾಂತದಲ್ಲಿ ನಿರ್ವಹಿಸುತ್ತಿರುವುದಾಗಿ ತಿಳಿಸಿದರು. ಪ್ರತಿನಿತ್ಯವೂ ಮುವತ್ತೈದು ಸಾವಿರ ಮಂದಿಗೆ ನಿತ್ಯಾನ್ನದಾನ ಮಾಡಲಾಗುವುದೆಂದು ತಿಳಿಸಿದರು. ತಿರುಮಲೆಯಲ್ಲಿ ವರ್ಷಾಭಾವದಿಂದಾಗಿ ಉಂಟಾಗಿರುವ ಸಂಕಟ ಸ್ಥಿತಿಯನ್ನು ಗಮನಿಸಿ, ನೀರನ್ನು ಆದಷ್ಟು ಉಳಿಸಬೇಕೆಂದು ಭಕ್ತರಿಗೆ ಕರೆನೀಡಿದರು. ಸೇವಾಟಿಕೆಟ್‌ಗಳನ್ನು, ವಸತಿ ಸೌಲಭ್ಯವನ್ನು ಭಕ್ತರಿಗೆ ಮೊದಲು ಬಂದವರಿಗೆ ಮೊದಲು ನೀಡುವ ಪದ್ಧತಿಯಿರುವುದನ್ನು ತಿಳಿಸುತ್ತ ಭಕ್ತರು ಅವರಿವರನ್ನು ನಂಬಿ ಮೋಸ ಹೋಗಬಾರದೆಂದು ಸೂಚಿಸಿದರು. ಯಾವುದೇ ಪರಿಸ್ಥಿತಿಯಲ್ಲಿ ಸಹ ಗೊಂದಲಕ್ಕೆ ಒಳಗಾಗದೆ ಹತ್ತಿರದಲ್ಲಿಯೇ ಕೆಲಸ ಮಾಡುತ್ತಿರುವಂತಹ ತಿ.ತಿ.ದೇ. ಸಿಬ್ಬಂದಿಯನ್ನು ವಿಚಾರಿಸಿ ಸೂಕ್ತ ಮಾರ್ಗದರ್ಶನ ಪಡೆಯಬೇಕೆಂದು ಸಲಹೆ ನೀಡಿದರು.

ತಿ.ತಿ.ದೇವಸ್ಥಾನಗಳ ಪ್ರಕಟನ ಶಾಖೆ ತಿರುಮಲೆಯ ಹಲವು ಸ್ಥಳಗಳಲ್ಲಿ ತಮ್ಮ ಧಾರ್ಮಿಕ ಪುಸ್ತಕ ಪ್ರದರ್ಶನ ಮಾರಾಟಗಳನ್ನು ಏರ್ಪಡಿಸಿದ್ದವು. ಅನ್ನದಾನಂ ಕಾಂಪ್ಲೆಕ್ಸ್‌ನ ಎದುರಿಗೆ ಕಲ್ಯಾಣಕಟ್ಟೆಯ ಬಳಿಯಲ್ಲಿ, ವೈಕುಂಠ ಕ್ಯೂಕಾಂಪ್ಲೆಕ್ಸ್‌ನ ಬದಿಯಲ್ಲಿ, ನಾರಾಯಣಗಿರಿ ಅತಿಥಿಗೃಹದ ಅಂಗಳದಲ್ಲಿ ಪುಸ್ತಕದಂಗಡಿಗಳಾದರೆ ತಿರುಮಲೆಯ ಬೇಡಿ ಆಂಜನೇಯಸ್ವಾಮಿ ಆಲಯದ ಬಳಿ ತಿ.ತಿ.ದೇ. ಪುಸ್ತಕ ಪ್ರದರ್ಶನದ ಚಲಿಸುವ ಅಂಗಡಿಯಿದ್ದಿತು. ಹಾಗೆಯೇ ತಿರುಮಲೆಯ ಲೇಪಾಕ್ಷಿ ಎಂಪೋರಿಯಂ ಪಕ್ಕದ ಆಂಧ್ರಪ್ರದೇಶದ ಸಮಾಚಾರ ಇಲಾಖೆಯ ಕಟ್ಟಡದಲ್ಲಿಯೂ ಪುಸ್ತಕದಂಗಡಿಯ ಏರ್ಪಾಡಾಗಿದ್ದಿತು. ಇಲ್ಲೆಲ್ಲ ತಿ.ತಿ.ದೇ. ಪುಸ್ತಕಗಳು ಶೇ 10 ಹಾಗೂ ಶೇ 25 ರಿಯಾಯಿತಿ ದರಗಳಲ್ಲಿಯೂ ತಿ.ತಿ.ದೇ. ಧನ ಸಹಾಯದಿಂದ ಪ್ರಕಟವಾದ ಧಾರ್ಮಿಕ ಪುಸ್ತಕಗಳು ಶೇ50 ರಿಯಾಯಿತಿಯಲ್ಲಿಯೂ ಮಾರಾಟವಾದವು. ಜೊತೆಗೇ ತಿ.ತಿ.ದೇವಸ್ಥಾನಗಳ ಆಡಿಯೋ ವೀಡಿಯೋ ಕ್ಯಾಸೆಟ್‌ಗಳೂ ಸಿ.ಡಿ.ಗಳೂ, ಮಾರಾಟಕ್ಕೆ ಇದ್ದವು. ಗರುಡೋತ್ಸವದ ದಿನ ಮುಖ್ಯಮಂತ್ರಿಗಳು 2003 ರ ಕ್ಯಾಲೆಂಡರ್ ಅನ್ನು ಬಿಡುಗಡೆ ಮಾಡಿದ ಮೇಲೆ ಕ್ಯಾಲೆಂಡರ್ ಅನ್ನೂ ಮಾರಾಟ ಮಾಡಲಾಯಿತು.

ಎಂಟನೆಯ ತಾರೀಖು ತಿರುಮಲೆಯ ಆಸ್ಥಾನ ಮಂಟಪದಲ್ಲಿ ಎಂದಿನಂತೆ ಧಾರ್ಮಿಕ ಕಾರ್ಯಕ್ರಮಗಳಾದವು. ಮಂತ್ರಾಲಯದ ಶ್ರೀ ವಾದಿರಾಜಾಚಾರ್ಯರು ದಾಸಸಾಹಿತ್ಯದ ಹಿರಿಮೆಯನ್ನೂ, ಹರಿದಾಸರ ಇಂದಿನ ಪ್ರಸ್ತುತತೆಯನ್ನೂ ವಿವರಿಸಿದರು. ಮಹಬೂಬ್ ನಗರದ ಶ್ರೀ ಯಲ್ಲಾರೆಡ್ಡಿಯವರು ಭಕ್ತಿತತ್ತ್ವದ ವಿವರ ನೀಡುತ್ತ ಪೋತನ ಭಾಗವತದ ಭಕ್ತಿಯನ್ನು ತಿಳಿಯಾಗಿ ವಿವರಿಸಿದರು. ಕನ್ನಡದ ಹರಿದಾಸರ ಕೀರ್ತನೆಗಳನ್ನು ಶ್ರೀ ಪುತ್ತೂರು ನರಸಿಂಹ ನಾಯಕರು ಶ್ರೋತೃಗಳಿಗೆ ಹಿತವಾಗುವಂತೆ ಹಾಡಿದರು. ಶ್ರೀ ಪ್ರಭಾಕರ ಶರ್ಮರು ಸುಂದರಕಾಂಡವನ್ನು ವಾಚಿಸಿದರು. ಯಲ್ಲಯ ಪಲ್ಲಿಯ ಶ್ರೀ ಶ್ರೀ ಬ್ರಹ್ಮಚಾರಿ ವಿಶ್ರುತ ಚೈತನ್ಯ ಸ್ವಾಮಿಜಿ ಭಕ್ತಿ ತತ್ತ್ವವನ್ನು ನಿಜಜೀವನದಲ್ಲಿ ಆಚರಣೆಗೆ ತರುವ ವಿಧಾನದ ಬಗ್ಗೆ ಉಪನ್ಯಾಸ ನೀಡಿದರು. ಶ್ರೀಮತಿ ನಾಗಮಣಿ ಹಾಗೂ ಶ್ರೀ ಸಿಂಹಾಚಲಶಾಸ್ತ್ರಿಗಳ ಹರಿಕಥೆಗಳು ಬೆಳಗ್ಗೆ ಸಂಜೆಗಳಲ್ಲಿ ಭಕ್ತರನ್ನು ಆಕರ್ಷಿಸಿತು. ಮಧ್ಯಾಹ್ನ ಶ್ರೀಶ್ರೀ ರಂಗನಾಥಾಚಾರ್ಯರು ಶ್ರೀರಾಮನ

ಪಾತ್ರದ ಮಹೋನ್ನತಿಯನ್ನೂ ಮರ್ಯಾದಾ ಪುರುಷೋತ್ತಮತೆಯನ್ನೂ ವಿವರಿಸಿದರು.

## ಮೂರನೆಯ ದಿನ

9-10-2002 ರಂದು ಬುಧವಾರ ಬೆಳಗ್ಗೆ ಸ್ವಾಮಿ ಸಿಂಹವಾಹನದಲ್ಲಿ ಮೆರವಣಿಗೆ ಬಂದರು. ಯೋಗನರಸಿಂಹಸ್ವಾಮಿಯಾದ ಶ್ರೀನಿವಾಸನು ಸಿಂಹವಾಹನನಾಗಿ ಶಿಷ್ಟಜನ ರಕ್ಷಕ ತಾನು ಎಂಬುದನ್ನು ತಿಳಿಯ ಹೇಳಲೋ ಎಂಬಂತೆ ಸಿಂಹವಾಹನನಾದದ್ದು ಆಕರ್ಷಕ ವಾಗಿದ್ದಿತು. ಸ್ವಯಮೇವನಾದ ಅವನು ಮೃಗೇಂದ್ರವಾಹನನಾದ್ದು ಪ್ರಾಣಿಗಳಲ್ಲಿನಾನು ಸಿಂಹ ಎಂದು ಹೇಳಿದ್ದರ ಪ್ರತೀಕವೆಂಬಂತೆ ಕಂಡುಬಂದದ್ದು ಸುಂದರವಾಗಿದ್ದಿತು. ಹಿಂದೆ ಮುಂದೆ ಹರಿದಾಸರ ಬೃಂದಗಳು ಹಾಡುತ್ತ ಬರಲು ಸ್ವಾಮಿ ಇಕ್ಕೆಲಗಳ ಭಕ್ತ ಜನ ಸಂದೋಹವನ್ನುಆಶೀರ್ವದಿಸುತ್ತ ಅನುಗ್ರಹಿಸಿ ಬರುವಲ್ಲಿ ನಾಲ್ಕು ತಿರುವೀಧಿಗಳ - ತೇರುಬೀದಿಗಳ - ಒಂದು ಆವರ್ತನಕ್ಕೆ ಮೂರುಗಂಟೆಗಳೇ ಹಿಡಿದವು.

ಅಂದು ಮಧ್ಯಾಹ್ನ ಶ್ರೀ ಭೂದೇವಿಯರನ್ನು ಸೇರಿದ ಮಲೆಯಪ್ಪಸ್ವಾಮಿಗೆ ಬ್ರಹ್ಮೋತ್ಸವದ ಎರಡನೆಯ ತಿರುಮಂಜನವು ತಿರುಮಲೆಯ ಆಲಯದ ಶ್ರೀರಂಗನಾಯಕ ಮಂಟಪದಲ್ಲಿ ನಡೆಯಿತು. ಎಂದಿನಂತೆ ತಿರುಮಂಟಪದಲ್ಲಿ ಹಾಲು, ತುಪ್ಪ, ಮೊಸರು, ಜೇನು, ನೀರು ಮೊದಲಾದ ದ್ರವ್ಯಗಳಿಂದಲೂ, ಮಂಗಳ ವಸ್ತುಗಳಿಂದಲೂ ತಿರುಮಂಜನ ನಡೆಸಿ, ತಿರುವಾಭರಣ ವಸ್ತ್ರಸಮರ್ಪಣೆ ಮಾಡಿ ವಾಹನ ಮಂಟಪಕ್ಕೆ ಕರೆತಂದು ಅಲಂಕೃತ ಮುತ್ತಿನ ಚಪ್ಪರ ವಾಹನದಲ್ಲಿ ಆಸೀನಗೊಳಿಸಲಾಯಿತು.

ಮುತ್ತಿನ ಚಪ್ಪರ ವಾಹನದಲ್ಲಿ ಕೃಷ್ಣರೂಪೀ ಭಗವಂತನು ಕಾಳೀಯಮರ್ದನೋದ್ಯೋಗದಲ್ಲಿ ತೊಡಗಿದಂತೆ ಒಂದು ಕಾಲು ವಾಹನ ತಳದಲ್ಲಿಯೂ ಒಂದು ಕಾಲು ಕಾಳೀಯನ ಹೆಡೆಯ ಮೇಲೆಯೂ ಇಟ್ಟಂತೆ ಅಲಂಕಾರ ಮಾಡಲಾಗಿದ್ದಿತು. ಆಚೀಚೆ



ಅಲಂಕೃತ ಆದಂತಹ ಶ್ರೀದೇವಿ ಭೂದೇವಿಯರು ನಿಂತಿರಲು, ದೂರಕ್ಕೂ ಸುಂದರವಾಗಿ ಕಂಡುಬರುವ ಮುತ್ತಿನ ಚಪ್ಪರದ ವಾಹನದಲ್ಲಿ ಮಧ್ಯದಲ್ಲಿ ಕಾಳೀಯ ಮರ್ದನ ಕೃಷ್ಣರೂಪೀ ಭಗವಂತನ ಮೆರವಣಿಗೆ ಅಪಾರ ಜನವನ್ನು ಆಕರ್ಷಿಸಿತ್ತು.

ಆಸ್ಥಾನ ಮಂಟಪದಲ್ಲಿ ವೇದಪಾರಾಯಣ ಗೀತಾಪಾರಾಯಣದ ನಂತರ ಬೆಂಗಳೂರಿನ ಶ್ರೀನಿವಾಸಾಚಾರ್ಯ ವರ್ಕೇಡಕರರು ದಾಸಸಾಹಿತ್ಯದಲ್ಲಿನ ನವವಿಧ ಭಕ್ತಿಯನ್ನು ವಿವರಿಸಿದರು. ಅವರ ಕನ್ನಡ ಭಾಷಣವನ್ನು ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ತೆಲುಗಿಗೆ ಅನುವಾದ ಮಾಡಿದರು. ವಿಷ್ಣು ಸಹಸ್ರನಾಮ ಪಾರಾಯಣದ ನಂತರ ಸಂಕೀರ್ತನ ಸೇವೆಯಿದ್ದಿತು. ಮಹಾತ್ಮರ ಸಂದೇಶ ವಿಭಾಗದಲ್ಲಿ ಅಕ್ಕಿವಾರದ ಶ್ರೀ ಮಾತಾ ತ್ಯಾಗಮಯಾನಂದ ಅವರು ತಂದೆ ತಾಯಿಗಳನ್ನು ಕಾಪಾಡುವುದರಲ್ಲಿನ ಮಹತ್ವವನ್ನು ವಿವರಿಸಿದರು. ಧರ್ಮವ್ಯಾಧನಕಥೆಯನ್ನು ವಿವರಿಸಿ ಹೇಳಿದ ಅವರು ತಂದೆ ತಾಯಿಯರಲ್ಲಿ ದೈವವನ್ನು ಕಂಡವನೇ ಮುಕ್ತನಾಗಬಲ್ಲ ಎಂದು ಅನುಗ್ರಹ ಭಾಷಣ ಮಾಡಿದರು. ಪುರಾಣ ಪ್ರವಚನದಲ್ಲಿ ಶ್ರೀ ಬಾಲಗಂಗಾಧರ ಶರ್ಮರು ವೆಂಕಟಾಚಲ ಮಹಾತ್ಮೆಯ ಪರಿಚಯೋಪನ್ಯಾಸ ನೀಡಿದರು. ಚೋಡವರದ ಶ್ರೀಮತಿ ಕೆ. ಇಂದಿರಾಬಾಲ ಅವರು ದ್ರೌಪದೀ ಮಾನಸಂರಕ್ಷಣ ಪ್ರಸಂಗದ ಹರಿಕಥೆ ಮಾಡಿದರು. ಶ್ರೀ ಶ್ರೀರಂಗನಾಥಾಚಾರ್ಯರು ವಾಲ್ಮೀಕಿರಾಮಾಯಣದಲ್ಲಿ ಭಾಗವತ ತತ್ವ ಪ್ರತಿಪಾದನೆಯನ್ನು ಹೇಗೆ ನಿರ್ವಹಿಸಲಾಗಿದೆ ಎಂಬುದನ್ನು ಮನಗಾಣಿಸಿದರು. ಚೆನ್ನೈನ ಶ್ರೀ ಎಸ್.ಆರ್. ಜಾನಕೀ ರಾಮನ್ ಅವರ ಸಂಕೀರ್ತನ ಗಾಯನ ಅತ್ಯದ್ಭುತ ಎನ್ನುವ ಹಾಗಿದ್ದಿತು.

## ನಾಲ್ಕನೆಯ ದಿನ

10-10-2002 ರಂದು ಗುರುವಾರ ಬೆಳಗ್ಗೆ ಸ್ವಾಮಿ ಶ್ರೀ ಭೂದೇವಿಯರೊಡನೆ ಕಲ್ಪವೃಕ್ಷ ವಾಹನದಲ್ಲಿ ಕೇಳಿದ ವರಗಳ ಕೊಡುವ ದೇವರಾಗಿ ಮಾಡವೀಧಿಗಳಲ್ಲಿ ಮೆರವಣಿಗೆ ಬಂದರು. ದೇವಲೋಕದಲ್ಲಿದ್ದು ಕೇಳಿದ್ದನ್ನೆಲ್ಲ ದಯಪಾಲಿಸುವ ಕಲ್ಪವೃಕ್ಷವೂ ತನ್ನ ಎದುರು ನಗಣ್ಯವಾದದ್ದು ಅಥವಾ ಅದನ್ನುಂಟು ಮಾಡಿದವನೇ ನಾನು ಎಂಬುದನ್ನು ಸಾರುವಂತೆ ಸ್ವಾಮಿ ಕಲ್ಪವೃಕ್ಷವಾಹನನಾದ ಎಂಬುದು



ಪ್ರಾಚೀನ ಪರಂಪರೆಯ ನಂಬಿಕೆ. ಬೆಳಗ್ಗೆ 9 ಗಂಟೆಗೆ ಆಲಯ ಬಿಟ್ಟಸ್ವಾಮಿ ತಿರುಗಿ ಆಲಯ ಸೇರಿದ್ದು ಹನ್ನೊಂದು ಗಂಟೆಗೆ. ನಾಲ್ಕು ಮಾಡವೀಧಿಗಳಲ್ಲಿ ಹೇಳತೀರದಷ್ಟು ಜನ ಗುಂಪು ಕೂಡಿ ಸ್ವಾಮಿಯನ್ನು ಸ್ವಾಗತಿಸಿದರು.

ಅಂದು ಸಂಜೆ ಸರ್ವಭೂಪಾಲವಾಹನದಲ್ಲಿ ಸ್ವಾಮಿ ಉಭಯ ನಾಯಕಿಯರೊಡನೆ ಮೆರವಣಿಗೆ ಹೊರಟರು. ಈ ಬಾರಿ ಸ್ವಾಮಿಗೆ ಶ್ರೀಕೃಷ್ಣವೇಷದಲ್ಲಿ ಬಕನನ್ನು ಬಾಯಿ ಸೀಳಿ ಹಾಕುವ ವೇಷ. ಆಕರ್ಷಕವಾಗಿ ಅಂದವಾಗಿ ದೂರಕ್ಕೂ ಕಂಡುಬರುತ್ತ ಹತ್ತಿರಕ್ಕೆ ಸೆಳೆದು ಮುದ ನೀಡುವ ದೃಶ್ಯವಾಗಿದ್ದಿತು. ಅಂದು ಮೆರವಣಿಗೆಯಲ್ಲಿ ಸ್ವಾಮಿಯನ್ನು ಸಂದರ್ಶಿಸಿದವರ ಸಂಖ್ಯೆ ಅರ್ಧಲಕ್ಷಕ್ಕೂ ಹೆಚ್ಚಾದರೆ ದರ್ಶನದ ಸಾಲಿನಲ್ಲಿ ನಿಂತು ಆಲಯದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿದವರ ಸಂಖ್ಯೆ 45 ಸಾವಿರದಷ್ಟಿದ್ದಿತು ಎಂದು ಹೇಳಲಾಗಿದೆ.

ತಿರುಮಲೆಯ ಆಸ್ಥಾನ ಮಂಟಪದಲ್ಲಿ ವೇದಪಂಡಿತರ ವೇದಪಾರಾಯಣ ಬೆಳಗಿನ ಹನಿಹನಿ ಮಳೆಯಲ್ಲಿಯೂ ನಡೆಯಿತು. ನಂತರ ಶ್ರೀ ಕೊಂಡಮಾಚಾರ್ಯರ ಗೀತಾ ಪಾರಾಯಣ. ಶ್ರೀ ಎನ್. ಮುರಳೀಧರ ಅವರು (ಚೆನ್ನೈ) ದಾಸರು ಹಾಡಿದ ದೇವರ ವೈವಿಧ್ಯ ವೈಶಿಷ್ಟ್ಯಗಳನ್ನು ವಿವರಿಸಿದರೆ, ಕರ್ನೂಲಿನ ಡಾ|| ಬ್ರಹ್ಮಾನಂದ ಶಾಸ್ತ್ರಿಗಳು ಧರ್ಮವನ್ನು ಆಚರಿಸಬೇಕಾದ ಅಗತ್ಯವನ್ನು ತುರ್ತನ್ನು ವಿವರಿಸಿದರು. ಬೆಂಗಳೂರಿನ ಸ್ವಾಮಿ ನಿಃಶ್ರೇಯಸಾನಂದಜೀ ಅವರು ಅನುಗ್ರಹ ಭಾಷಣ ನೀಡಿದರು. ಪುರಾಣ ಪ್ರವಚನದಲ್ಲಿ ಶ್ರೀ ಬಾಲಗಂಗಾಧರ ಶರ್ಮ ಅವರು ತಿರುಮಲೆಯ ತೀರ್ಥಗಳ ಮಹಿಮೆಯನ್ನು ವಿವರಿಸಿದರೆ, ನೆಲ್ಲೂರಿನ ಶ್ರೀ ವಾಮನ ಮೂರ್ತಿ ಅವರ ಹರಿಕಥೆ ಭಕ್ತರನ್ನು ಆಕರ್ಷಿಸಿತು. ಉಜ್ಜಯಿನಿಯ ಶ್ರೀರಂಗನಾಥಾಚಾರ್ಯ ಸ್ವಾಮಿಜೀ ಅವರು ರಾಮಾಯಣದಲ್ಲಿ ಕಂಡು ಬರುವ ಸೋದರ ಧರ್ಮವನ್ನು ವಿವರಿಸಿದರು. ಅನ್ನಮಾಚಾರ್ಯ ಪ್ರಾಜೆಕ್ಟಿನ ಶ್ರೀರಂಗನಾಥ್ ಮತ್ತಿತರರು ಸಂಕೀರ್ತನ ಸೇವೆಯನ್ನು ಮಾಡಿದರು. ಮೈಸೂರಿನ ಶ್ರೀಮತಿ ವಿ. ಮಾಲಿನಿಯವರು ಹರಿಕಥೆಯನ್ನು ನಡೆಸಿ ಕೊಟ್ಟರು.



ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಶ್ರೀ ಎಸ್.ವಿ. ಬಾಲಸಾಯಿ ಹಾಗೂ ಶ್ರೀ ಎ. ದುರ್ಗಪ್ರಸಾದ್ ಬೃಂದದವರಿಂದ ಸಂಗೀತವಾದರೆ ಸಂಜೆ ಕುಮಾರಿ ಸ್ಮಿತ ಮಾಧವಿ ನೃತ್ಯರೂಪದ ಸ್ವಾಮಿಸೇವೆ ಸಂಪನ್ನವಾಯಿತು. ಮಹತಿ ಸಭಾಭವನದಲ್ಲಿ ಬೆಳಗ್ಗೆ ಸಂಗೀತ ಹಾಗೂ ಸಂಜೆ ನೃತ್ಯ ಸೇವೆ ಸಲ್ಲಿಸಲಾಯಿತು. ತಿರುಮಲೆಯ ಯಾತ್ರಿಕ ಸೌಲಭ್ಯ ಸಮುದಾಯದಲ್ಲಿ ಹರಿಕಥೆ ನಡೆಯಿತು.

## ಗರುಡೋತ್ಸವ

11-10-2002 ರಂದು ಶುಕ್ರವಾರ ಬ್ರಹ್ಮೋತ್ಸವದ ಒಂದು ಮುಖ್ಯ ಘಟ್ಟ. ಅಂದು ಬೆಳಗ್ಗೆ ಮೋಹಿನಿ ಅವತಾರವಾದರೆ ಸಂಜೆ ಗರುಡಸೇವೆ - ಎರಡೂ ಪ್ರಮುಖವೇ ಆದರೂ ಅಂದು ಸಂಜೆಗಾಗಿ ಜನ ಹಿಂದಿನ ದಿನದಿಂದಲೇ ತಿರುಮಲೆಗೆ ಬರತೊಡಗುವುದು ಬಹುಕಾಲದಿಂದಲೂ ನಡೆದು ಬಂದಿರುವ ಪದ್ಧತಿಯಾಗಿದೆ.

ಅಂದು ಬೆಳಗ್ಗೆ ಮೋಹಿನೀ ಅವತಾರ. ಕ್ಷೀರಸಾಗರ ಮಥನದಲ್ಲಿ ಅಮೃತ ಹುಟ್ಟಿ ಬಂದಾಗ ಅದನ್ನು ದೇವಾಸುರರಲ್ಲಿ ವಿತರಿಸಲು ಸ್ವಾಮಿ ಮೋಹಿನೀ ಅವತಾರ ವೆತ್ತಿದ ವೈನವನ್ನು ತಿಳಿಸಿ ಹೇಳುವಂತೆ ಮಲೆಯಪ್ಪಸ್ವಾಮಿ ಮೋಹಿನೀ ಅವತಾರ ಧರಿಸಿದ್ದರು. ತುಂಬು ಆಕರ್ಷಣೆಯ ಸೀರೆಯುಟ್ಟು ಮೂಗುತಿಯನ್ನು ಧರಿಸಿ ಅಲಂಕಾರವಾಗಿ ಹೆಣೆದ ಜಡೆಯ ಸಹಿತವಾಗಿ ಗಿಣಿಯನ್ನು ಕೈಯಲ್ಲಿ ಕುಳ್ಳಿರಿಸಿಕೊಂಡು ದಂತದ ಪಲ್ಲಕ್ಕಿಯಲ್ಲಿ ಬರುತ್ತಿರಲು ಪಕ್ಕದಲ್ಲಿಯೇ ಶ್ರೀಕೃಷ್ಣಸ್ವಾಮಿಯ ಪಲ್ಲಕ್ಕಿಯೂ ನಡೆದಿದ್ದಿತು. ಒಟ್ಟು ನೋಟ ಕಣ್ಣಿಗೆ ಹಬ್ಬವಾಗಿ ಶೋಭಿಸಿತು.

ಅಂದು ಸಂಜೆ ಗರುಡವಾಹನ. ಈ ಗರುಡವಾಹನದ ವೈಶಿಷ್ಟ್ಯವೇ ಬೇರೆ. ಮಲೆಯಪ್ಪಸ್ವಾಮಿ ಶ್ರೀ ವೆಂಕಟೇಶ್ವರನ ತದ್ವತ್ ಸ್ವರೂಪದ ಉತ್ಸವ ವಿಗ್ರಹ. ಆಲಯದ ಹೊರಗೆ











ತಿರುಮಲೆ ಸ್ವಾಮಿಯ ಬ್ರಹ್ಮೋತ್ಸವ ದೃಶ್ಯಗಳು (ಅಕ್ಟೋಬರ್ 7 ರಿಂದ 15 ವರೆಗೆ) :
ಧ್ವಜಾರೋಹಣ, ಗರುಡವಾಹನ, ರಥೋತ್ಸವ, ಸೂರ್ಯಪ್ರಭವಾಹನ ಹಾಗೂ ಚಕ್ರಸ್ನಾನ.




**ಆನಂದ ನಿಲಯ ವಿಮಾನ :** ಕಲಿಯುಗ ವೈಕುಂಠವಾದ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಗರ್ಭಗುಡಿಯ ಮೇಲಿನ ವಿಮಾನವೇ ಆನಂದ ನಿಲ
ಸಮೇತವಾಗಿ 38 ಅಡಿ ಎತ್ತರವಿದ್ದು 27.5 ಅಡಿ ಅಗಲವಿದೆ. ಶಾಸನಗಳ ಪ್ರಕಾರ ಕ್ರಿ.ಶ. 1262 ರಲ್ಲಿ ಮೊದಲಬಾರಿಗೆ ಸುಂದರ ಪಾಂಡ್ಯರಾಜನು ಬಂಗಾರದ ಕಲಶವ
1359 ರಲ್ಲಿ ಸಾಳುವ ಮಂಗಿದೇವನು ಈ ವಿಮಾನಕ್ಕೆ ಬಂಗಾರದ ಮುಲಾಮು ಏರ್ಪಡಿಸಿದನು. ಆ ನಂತರ ವಿಜಯನಗರ ಸಾಮ್ರಾಟ ಶ್ರೀ ಕೃಷ್ಣದೇವರಾಯನು
ತಿರುಮಲೆ ತಿರುಪತಿ ದೇವಸ್ಥಾನಗಳು ಈ ವಿಮಾನಕ್ಕೆ ಮತ್ತೆ ಸುಮಾರು 12 ಸಾವಿರ ತೊಲ ಚಿನ್ನದಿಂದ ಲೇಪನ ಮಾಡಿಸಿದರು. ಈ ವಿಮಾನ ಆಧ್ಯಾತ್ಮಿಕ ಸಂಪತ್ತಿಗೆ ನಿಕೇತ

1500



VIMANAM, TIRUMALA

PHOTOGRAPH MARKONDEYA DESIGN SIVAPRASAD TTD

ಮಾನ. ಮೂರು ಅಂತಸ್ತಿನಲ್ಲಿ ಕಾಣಿಸುವ ಈ ವಿಮಾನವು ಕಲಶ
ಾಡಿಸಿ ವಿಮಾನದ ಮೇಲೆ ಪ್ರತಿಷ್ಠಾಪಿಸಿದನು. ತದನಂತರ ಕ್ರಿ.ಶ.
ದ ನಿಲಯಕ್ಕೆ ಬಂಗಾರದ ಮುಲಾಮು ಹಚ್ಚಿಸಿದನು. 1958 ರಲ್ಲಿ
ಶ್ರೀನಿವಾಸನ ಅಪಾರ ಕರುಣಾದೃಷ್ಟಿಗೆ, ಜಗನ್ನಾಯಕತ್ವಕ್ಕೆ ಕೇತನ.

# ತಿರುಮಲೆ ತಿರುಪತಿ ದೇವಸ್ಥಾನಗಳು

## ಆನಂದ ನಿಲಯ ಅಂಚೆ ಚೀಟಿ ಬಿಡುಗಡೆ



ಅಕ್ಟೋಬರ್ 11 ರಂದು ತಿರುಪತಿಯಲ್ಲಿ ಆನಂದನಿಲಯದ ಚಿತ್ರದ ಅಂಚೆ ಚೀಟಿ ಬಿಡುಗಡೆ ಮಾಡುತ್ತಾ ಕೇಂದ್ರ ಮಂತ್ರಿ ಶ್ರೀ ಪ್ರಮೋದ ಮಹಾಜನ್. ಬದಿಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬು ನಾಯುಡು, ಮಂತ್ರಿ ಶ್ರೀ ಡಿ. ಶಿವರಾಮರಾಜು, ಎಂ.ಪಿ. ಶ್ರೀ ಎನ್. ವೆಂಕಟಸ್ವಾಮಿ, ತಿ.ತಿ.ದೇ. ಅಧ್ಯಕ್ಷರು ಶ್ರೀ ಪಿ. ಚಲಪತಿರಾವ್, ಇ.ಓ. ಡಾ|| ಪಿ. ಕೃಷ್ಣಯ್ಯ ಅವರನ್ನು ಕಾಣಬಹುದು.

ಬಂದಾಗಲೆಲ್ಲ ಸ್ವಾಮಿಯ ಪ್ರತಿರೂಪದ, ಪ್ರತಿನಿಧಿಯ, ಪ್ರತೀಕವಾದರೂ ತನ್ನದೇ ಆದ ಆಭರಣ ಕಿರೀಟಗಳನ್ನು ಹೊಂದಿ ಶೋಭಾಯಮಾನವಾದ ಮೂರ್ತಿ. ಗರುಡವಾಹನನಾದಾಗ ಮಾತ್ರ ಮೂಲ ಮೂರ್ತಿಗೆ ಅಲಂಕಾರವಾಗುವ ಮಕರಕಂಠಿಸರ, ಲಕ್ಷ್ಮೀಹಾರ, ಸಹಸ್ರನಾಮದ ಹಾರ - ಮೊದಲಾದವೆಲ್ಲ ಮಲೆಯಪ್ಪಸ್ವಾಮಿಯ ಅಲಂಕಾರಗಳಾಗುತ್ತವೆ. ಹಾಗಾಗಿ ದೂರಕ್ಕೂ ಹೊಳೆಯುತ್ತ ಬೆಳಕಿನ ಪುಂಜದಂತೆ ಕಂಡುಬರುತ್ತದೆ. ಶ್ರೀವಿಲ್ಲಿಪುತ್ತೂರಿನಲ್ಲಿ ಗೋದಾದೇವಿ ಭೂಮಿಯಲ್ಲಿ ಪೆರಿಯಾಳ್ವಾರರಿಗೆ ದೊರಕಿದಳು. ಆಕೆ ತಾನು ಮುಡಿದ ಹೂವಿನ ಹಾರವನ್ನು ದೇವರಿಗೆ ನೀಡಿ ಸೂಡಿಕುಡುತ್ತ ನಾಚ್ಚಿಯಾರ್ ಆದಾಕೆ. ತಿರುಮಲೆಯ ಬ್ರಹ್ಮೋತ್ಸವಕ್ಕೆ ಶ್ರೀವಿಲ್ಲಿಪುತ್ತೂರಿನಿಂದ ತುಳಸೀ ಮಾಲೆಗಳು ಸ್ವಾಮಿಗೆ ಅಲಂಕಾರವಾಗಲು ಬಂದು ಸೇರುತ್ತವೆ. ಜೊತೆಗೇ ಚೆನ್ನೈನಿಂದ ಹೊಸದಾಗಿ ತಯಾರಾದ ಶ್ವೇತಛತ್ರಗಳು ಸ್ವಾಮಿಯ ಗರುಡವಾಹನದಲ್ಲಿ ಸಮರ್ಪಿತ ವಾಗಲು ಕಾಲುನಡಿಗೆಯಿಂದ ತರಲಾಗುತ್ತದೆ. ಜೊತೆಗೆ ಆಂಧ್ರಪ್ರದೇಶದ ಸರ್ಕಾರದ ಪರವಾಗಿ ಬರುವ ಸ್ವಾಮಿಯ ರೇಷ್ಮೆ ವಸ್ತ್ರಗಳು. ಈ ವಸ್ತ್ರವನ್ನು ರಾಜ್ಯದ ಮುಖ್ಯಮಂತ್ರಿ ತಲೆಯ ಮೇಲೆ ಹೊತ್ತು ತಂದು ಸಮರ್ಪಿಸುತ್ತಾರೆ. ಅದು ಇಲ್ಲಿನ ಪರಂಪರೆ. ಈ ಬಾರಿ ಮುಖ್ಯಮಂತ್ರಿ ಶ್ರೀ ಚಂದ್ರಬಾಬು ನಾಯುಡು ಅವರು ಸಕುಟುಂಬರಾಗಿ ತಿರುಮಲೆಗೆ ಆಗಮಿಸಿ ಬೇಡಿ ಆಂಜನೇಯ ಸ್ವಾಮಿ ಗುಡಿಯ ಬಳಿಗೆ ಬಂದು ಅರ್ಚಕರು ತಲೆಗೆ ಪಾಗು ಕಟ್ಟಿದ ಮೇಲೆ ಅದರ ಮೇಲೆ ರೇಷ್ಮೆವಸ್ತ್ರದ ಬೆಳ್ಳಿಯ ತಟ್ಟೆಯನ್ನಿಟ್ಟು ಕೊಂಡು ಮಂಗಳ ವಾದ್ಯಗಳ ನಾದಘೋಷದ ನಡುವೆ ಆಲಯಕ್ಕೆ ಬಂದು ವಸ್ತ್ರಗಳನ್ನು ಸ್ವಾಮಿಗೆ ಸಮರ್ಪಿಸಿದರು. ನೂತನ ಮೇಲ್ಚಾಟ್ಟು ಮಕರಕಂಠಿ ಲಕ್ಷ್ಮೀಹಾರ ಆದಿ ಆಭರಣಾಲಂಕಾರಗಳಿಂದ ಕೂಡಿದ ಸ್ವಾಮಿಯು ರಾತ್ರಿ ಒಂಭತ್ತು ಗಂಟೆಗೆ ಗರುಡವಾಹನನಾಗಿ ಮೆರವಣಿಗೆ ಹೊರಟು ನಾಲ್ಕು ಗಂಟೆಗಳ ಕಾಲ ತಿರುಮಲೆಯ ರಥಬೀದಿಗಳಲ್ಲಿ ತಿರುಗಿ ಗುಡಿಯನ್ನು ಬಂದು ಸೇರಿದ್ದಾಯಿತು. ಈ ಮಧ್ಯೆ ಸ್ವಾಮಿಯನ್ನು ಸಂದರ್ಶಿಸಿದವರ ಸಂಖ್ಯೆ ಎಂಭತ್ತು ಸಾವಿರಕ್ಕೂ ಹೆಚ್ಚು ಎಂಬುದು ಒಂದು ಅಂದಾಜು ಮಾತ್ರವೇ.

ಕಾರಣ ಅಂದು ಎಂದಿಗಿಂತ ಹೆಚ್ಚು ಜನಸಾಂದ್ರತೆಯಿದ್ದಿತು. ಅಂದು 122 ಬಸ್‌ಗಳನ್ನು 48 ಸೆಕಂಡಿಗೆ ಒಂದರಂತೆ ಕಳುಹಿಸಲಾಯಿತು. 1384 ಟ್ರಿಪ್‌ಗಳನ್ನು ನಡೆಸಿ 54458 ಮಂದಿಯನ್ನು ತಿರುಮಲೆಗೆ ಕರೆದೊಯ್ಯಲಾಯಿತು. ಅಷ್ಟೇ ಜನವನ್ನು ತಿರುಮಲೆಯಿಂದ ಇಳಿಸಲಾಯಿತು.

## ಆರಂಭ, ಉದ್ಘಾಟನೆಗಳು

ಮುಖ್ಯಮಂತ್ರಿ ಶ್ರೀ ಚಂದ್ರಬಾಬು ನಾಯುಡು ಅವರು ಗರುಡಸೇವೆಯ ಮಧ್ಯಾಹ್ನವೇ ತಿರುಪತಿಯನ್ನು ಸೇರಿದರು. ತಿರುಪತಿಯ ಕೇಂದ್ರ ಗ್ರಂಥ ಭಂಡಾರದಲ್ಲಿ ಡಿಜಿಟಲ್ ಲೈಬ್ರೆರಿಯನ್ನು ಅವರು ಉದ್ಘಾಟಿಸಿದರು. ಈ ಕಾರ್ಯಕ್ರಮದಲ್ಲಿ ಅವರೊಂದಿಗೆ ಕೇಂದ್ರ ಮಂತ್ರಿ ಶ್ರೀ ಪ್ರಮೋದ ಮಹಾಜನ್ ಅವರೂ ಇದ್ದರು. ಶ್ರೀ ಪ್ರಮೋದ ಮಹಾಜನ ಅವರು ಅಂಚೆ ಇಲಾಖೆಯವರು ತಯಾರಿಸಿದ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಆನಂದ ನಿಲಯ ವಿಮಾನದ ಸ್ಟಾಂಪ್ ಅನ್ನು ಬಿಡುಗಡೆ ಮಾಡಿದರು. ಅನಂತರ ತಿರುಮಲೆಯನ್ನು ಸೇರಿದ ಮುಖ್ಯ ಮಂತ್ರಿಗಳು ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನ ಮೇಲೆ ಹೊಸದಾಗಿ ನಿರ್ಮಾಣ ಮಾಡಲಾದ ಸೌರಶಕ್ತಿ ಅಡುಗೆ ವ್ಯವಸ್ಥೆಯನ್ನು ಉದ್ಘಾಟಿಸಿದರು. 1.11 ಕೋಟಿ ರೂಪಾಯಿಗಳ ವೆಚ್ಚದ ಈ ಸೌರಶಕ್ತಿ ಅಡುಗೆ ವ್ಯವಸ್ಥೆಯಿಂದ ದಿನಕ್ಕೆ 30 ಸಾವಿರ ಮಂದಿಗೆ ಸಾಕಾಗುವಷ್ಟು ಅಡುಗೆ ಮಾಡಬಹುದಾಗಿದೆ. ಇಡೀ ಏಷ್ಯಾಖಂಡ ದಲ್ಲಿಯೇ ಅತಿದೊಡ್ಡ ಸೌರಶಕ್ತಿ ಸಂಗ್ರಹ ಬಳಕೆಯ ಕೇಂದ್ರ ತಿರುಮಲೆಯ ಅನ್ನದಾನ ಮಂದಿರ ಎಂದು ಹೇಳಲಡ್ಡಿಯಿಲ್ಲ. ಮುಖ್ಯಮಂತ್ರಿಗಳು ಅದರ ಎದುರಿಗೆ ಹೊಸದಾಗಿ 2.65 ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿದ ಹೊಸದಾದ ಕಲ್ಯಾಣಕಟ್ಟೆಯ ಭವನವನ್ನು ಉದ್ಘಾಟಿಸಿದರು. ದಿನದಿನವೂ ಯಾತ್ರಿಕರ ಸಾಂದ್ರತೆ ಹೆಚ್ಚಿ, ಈಗಿರುವ ಕಲ್ಯಾಣಕಟ್ಟೆಯ ಸ್ಥಳ ಸಾಕಾಗದೆ, ಹೊಸದಾದ ಈ ಕಲ್ಯಾಣ ಕಟ್ಟೆಯನ್ನು ನಿರ್ಮಿಸಲಾಗಿದೆ. ಇಲ್ಲಿ ಬಿಸಿನೀರಿನ ಸ್ನಾನ ಸೌಲಭ್ಯ, ಕುಳಿತು ಕಾಯತಕ್ಕ ಅವಕಾಶಗಳು ಶೌಚಗೃಹಗಳು - ಎಲ್ಲ ಇದ್ದು ವೈಶಾಲ್ಯವು ಹೆಚ್ಚಾಗಿದ್ದು, ಬೇರೆ ಬೇರೆ ಅಳತೆಯ ಕೂದಲ ಸಂಗ್ರಹ ಶೇಖರಣೆಗೆ ವ್ಯವಸ್ಥೆಯಿದೆ. ಮುಖ್ಯಮಂತ್ರಿಗಳು ಈ ಎಲ್ಲ ಸೌಕರ್ಯಗಳನ್ನು ಪರಿಶೀಲಿಸಿ ತಿಳಿದುಕೊಂಡು ಇಲ್ಲಿಗೆ ನಿರಂತರವಾದ ನೀರಿನ ವಿತರಣೆಯಾಗುವುದು ಬಹುಮುಖ್ಯ ಎಂಬುದನ್ನು ನೆನಪಿಸಿದರು.

ಆಲಯದ ಒಳಗೆ ಮುಖ್ಯಮಂತ್ರಿ ಹಾಗೂ ಶ್ರೀ ಪ್ರಮೋದ ಮಹಾಜನರಿಗೆ ವೇದಾಶೀರ್ವಾದ ನೀಡಿ ಪ್ರಸಾದಗಳನ್ನು ನೀಡಲಾಯಿತು. ಆಗ ಮುಖ್ಯ ಮಂತ್ರಿಗಳು 2003 ನೇ ವರ್ಷದ ತಿ.ತಿ.ದೇ. ಕ್ಯಾಲೆಂಡರಗಳನ್ನು ಬಿಡುಗಡೆ ಮಾಡಿದರು. ಸ್ವಾಮಿ ಹಾಗೂ ಅಮ್ಮನವರಿರುವ ಚಿಕ್ಕ ಕ್ಯಾಲೆಂಡರ್ ಹಾಗೂ ಸ್ವಾಮಿಯ ದೊಡ್ಡ ಚಿತ್ರದ ದೊಡ್ಡ ಕ್ಯಾಲೆಂಡರುಗಳು ಎರಡೂ ಅನಂತರ ಹೊರಗಡೆ ತಿ.ತಿ.ದೇ. ಪುಸ್ತಕ ಮಾರಾಟದಂಗಡಿಗಳಲ್ಲಿ ಯಾತ್ರಿಕರಿಗೆ ಮಾರಾಟ ಮಾಡುವ ಅವಕಾಶ ಕಲ್ಪಿಸಲಾಯಿತು.

ತಿರುಮಲೆಯ ಆಸ್ಥಾನ ಮಂಟಪದಲ್ಲಿ ಶುಕ್ರವಾರದ ದಿನ ವೇದಪಾರಾಯಣ, ಗೀತಾ ಪಠಣಗಳಾದ ಮೇಲೆ ಶ್ರೀ ರಾಜಗೋಪಾಲ ಚಕ್ರವರ್ತಿಗಳ ಧಾರ್ಮಿಕ ಉಪನ್ಯಾಸ ವಿದ್ದಿತು. ಆಳ್ವಾರರಲ್ಲಿ ಏಕಮಾತ್ರ ಸ್ತ್ರೀಯಾದ ಗೋದಾದೇವಿಯ ಭಕ್ತಿ ವೈಭವ ವಿವರಿಸಿದರು. ನಂತರ ಶ್ರೀ ಕದಿರಿ ನರಸಿಂಹುಲು ಸಂಗೀತ ಸಭೆ ನಡೆಸಿಕೊಟ್ಟರು. ಶ್ರೀವಂಗಲ ಪಟ್ಟಾಭಿ



ಭಾಗವತರ್ ಅವರು ತರಿಗೊಂಡ ವೆಂಗಮಾಂಬ ಹರಿಕಥೆಯನ್ನು ನಡೆಸಿಕೊಟ್ಟರು. ಪೆದ್ದಾಪುರದ ಶ್ರೀ ಶ್ರೀ ಓಂಕಾರಾನಂದಗಿರಿ ಸ್ವಾಮಿಗಳು ಅನುಗ್ರಹ ಭಾಷಣಮಾಡಿ ಭಕ್ತಿ ಭಾವವನ್ನು ಹರಡಿದರು. ವಿಶಾಖ ಪಟ್ಟಣದ ಶ್ರೀ ಸತ್ಯನಾರಾಯಣ ಮೂರ್ತಿ ಅವರು ಪುರಾಣ ಪ್ರವಚನ ಮಾಡುತ್ತ ತಿರುಮಲೆಯ ಕ್ಷೇತ್ರ ವೈಭವವನ್ನು ವಿವರಿಸಿದರು. ಉಜ್ಜೈನಿಯ ಶ್ರೀ ಶ್ರೀಗಳು ರಾಮಾಯಣದ ಸ್ತ್ರೀ ಪಾತ್ರಗಳ ಆದರ್ಶ ಗಳನ್ನು ವಿವರಿಸಿದರು. ಅನ್ನಮಾ ಚಾರ್ಯ ಪ್ರಾಜೆಕ್ಟಿನ ಶ್ರೀ ಜಿ. ನಾಗೇಶ್ವರ ನಾಯುಡು ಅನ್ನಮಾಚಾರ್ಯರ ಕೃತಿಗಳ ಸೊಗ ಸಾದ ಗಾಯನ ಮಾಡಿದರು. ಶ್ರೀ ಪ್ರಪಂಚಂ ಸೀತಾರಾಮರ ಕೊಳಲು ವಾದನ ರಂಜಿಸಿತು.

ತಿರುಪತಿಯ ಮಹತಿ ಸಭಾಂಗಣದಲ್ಲಿ ವಿಶಾಖಪಟ್ಟಣದ ಅನ್ನಮಯ್ಯ ಸಂಗೀತ ವಿದ್ಯಾಲಯದ ವಿದ್ಯಾರ್ಥಿಗಳ ಸಂಕೀರ್ತನೆಗಳ ಗಾಯನ ಕಳೆಕಟ್ಟಿತು. ಹೈದರಾಬಾದಿನ ಶ್ರೀ ಪ್ರಸಾದ್ ಡಿ. ಆನಂದ ಅವರ ನೃತ್ಯ ಸುಂದರವಾಯಿತು.

## ಚಿನ್ನದ ರಥದ ದಿನ

12-10-2002 ರಂದು ಶನಿವಾರ ಮತ್ತೊಂದು ರೀತಿಯ ಆಕರ್ಷಣೆ. ಅಂದು ಬೆಳಗ್ಗೆ ಸ್ವಾಮಿಗೆ ಹನುಮಂತನು ವಾಹನ. ಶ್ರೀರಾಮನು ಹನುಮಂತನ ಹೆಗಲನ್ನೇರಿ ಯುದ್ಧ ಭೂಮಿಗೆ ನಡೆದದ್ದು ತ್ರೇತಾಯುಗದ ಸಂಘಟನೆಯಾದರೆ ಕಲಿಯುಗದಲ್ಲಿ ಹನುಮಂತನ ಹೆಗಲ ಮೇಲೇರಿ ಶ್ರೀ ವೆಂಕಟೇಶ್ವರಸ್ವಾಮಿ ಭಕ್ತರ ಮಧ್ಯದಲ್ಲಿ ಬಂದ. ಸ್ವಾಮಿಗೆ ಹನುಮಂತನಿಗಿಂತ ಹತ್ತಿರದ ಭಕ್ತರಾದರೂ ಇರಲುಂಟೆ! ಹನುಮಂತ ತನ್ನೆಲ್ಲ ಧ್ಯಾನ ಜ್ಞಾನ ಶಕ್ತಿ ಸಾಮರ್ಥ್ಯಗಳನ್ನು ಶ್ರೀರಾಮ ಕೈಂಕರ್ಯಕ್ಕೆ ಮೀಸಲಿಟ್ಟ ವ್ಯಕ್ತಿ. ಅವತಾರ ಪುರುಷ. ಸ್ವಾಮಿ ಸುಖದಲ್ಲಿಯೇ ಸ್ವಸುಖವನ್ನು ಕಂಡುಂಡ ಪಾವನ ಮೂರ್ತಿ. ಅಂತಹ ವಾಹನೋತ್ಸವದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಭಕ್ತ ಯಾತ್ರಿಕರು ಭಾಗವಹಿಸಿದ್ದು ಸೂಕ್ತವೂ ಸಮಯೋಚಿತವೂ ಆಗಿದ್ದಿತು.

ಅಂದು ಮಧ್ಯಾಹ್ನ ವಸಂತೋತ್ಸವ. ಸ್ವಾಮಿ ಉಭಯ ನಾಯಕಿಯರ ಜೊತೆಗೆ ಶ್ರೀ ರಂಗನಾಯಕ ಮಂಟಪದಲ್ಲಿ ವಸಂತೋತ್ಸವಕ್ಕೆ ಬರುತ್ತಾರೆ. ಅಲ್ಲಿ ವಸಂತ ಉತ್ಸವ ನಡೆದ ನಂತರ ಸಮರ್ಪಣೆಯಾಗಿ ಉಭಯ ನಾಯಕೀ ಸಮೇತವಾಗಿ ಸುವರ್ಣ ರಥದಲ್ಲಿ ಊರ ಮೆರವಣಿಗೆ ಬರುತ್ತಾರೆ. ಹೊಳೆ ಹೊಳೆಯುವ ಆಭರಣಗಳನ್ನು ಧರಿಸಿ ಚಿನ್ನದ ರಥದಲ್ಲಿ ಸ್ವಾಮಿ ಬರುತ್ತಿರುವುದನ್ನು ಕಾಣಲು ಬೆಳಗಿನಿಂದಲೇ ಜನ ರಸ್ತೆಯಿಕ್ಕೆಲದ ಮೆಟ್ಟಿಲುಗಳ ಮೇಲೆ ಕುಳಿತು ಕಾದಿದ್ದರು.

ಅಂದು ಸಂಜೆ ಗಜವಾಹನದಲ್ಲಿ ಸ್ವಾಮಿ ಮಾಡವೀಧಿಗಳಲ್ಲಿ ಮೆರವಣಿಗೆಯಲ್ಲಿ ಬಂದು ಭಕ್ತರ ನಯನಾನಂದಕರವಾಗಿ ಬೆಳಗಿದರು. ಗಜೇಂದ್ರನ ಮೊರೆ ಕೇಳಿ ಸತಿ ರಮೆಗೂ ಹೇಳದೆ, ವಾಹನವಾದ ಗರುಡನನ್ನೂ ಕರೆಯಲು ಕಾಯದೆ, ಓಡಿಬಂದು ಕಾಪಾಡಲು ನಿಂತ ಸ್ವಾಮಿ ಗಜವಾಹನನಾಗಿ ಭಕ್ತರನ್ನು ಕಾಪಾಡಲು ತಿರುವೀಧಿಗಳಲ್ಲಿ ತಿರುಗಾಡುತ್ತಾನೆ ಎಂದರೆ ಅಲ್ಲಿನ ಕರುಣೆಗೆ ಕೊನೆಯೆಲ್ಲಿ! ಗಜಗಮನದಲ್ಲಿ ಸ್ವಾಮಿಯ ಮೆರವಣಿಗೆ ಹಿಂದಿನ ದಿನಗಳಲ್ಲಿನ ಅವಸರ, ಆತಂಕಗಳಿಲ್ಲದಂತೆ ಎಲ್ಲರಿಗೂ ನಿಧಾನವಾಗಿ ದರ್ಶನ ನೀಡುತ್ತ ನಿಧಾನವಾಗಿ ಮುಂದುವರೆದು ಆಲಯಕ್ಕೆ ಹಿಂದಿರುಗಿತು ಎಂದು ಹೇಳುವುದರಲ್ಲಿ ಅತಿಶಯವಿಲ್ಲ.

ತಿರುಮಲೆಯ ಆಸ್ಥಾನ ಮಂಟಪದಲ್ಲಿ ಎಂದಿನಂತೆ ವೇದಪಾರಾಯಣ ಗೀತಾಪಠಣ ಗಳಾದವು. ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ಪರವಾಗಿ ಶ್ರೀ ವಿಭೀಷಣ ಶರ್ಮ ಧರ್ಮ ಹಾಗೂ ಸಮಾಜದ ಅಂತರಂಗವನ್ನು ವಿಶ್ಲೇಷಿಸಿ ಸಮಾಜದ ಒಳಿತಿಗೆ, ಅಭಿವೃದ್ಧಿಗೆ - ಧರ್ಮ ಒಂದು ಅತ್ಯಗತ್ಯವಾದ ಸಾಮಗ್ರಿ ಪರಿಕರ ಎಂಬುದನ್ನು ವಿವರಿಸಿದರು. ಸಿಕಂದರಾಬಾದಿನ ಶ್ರೀ ಮುಕುಂದರಾಯರು ಧಾರ್ಮಿಕ ಉಪನ್ಯಾಸ ವನ್ನು ನೀಡಿದರು. ಅನ್ನಮಾಚಾರ್ಯರ ಸಂಕೀರ್ತನೆಗಳ ಗಾಯನದಿಂದಲೂ, ತ್ಯಾಗರಾಜರ ಕೃತಿಗಳ ಗಾಯನದಿಂದಲೂ ಆಸ್ಥಾನ ಮಂಟಪ ತುಂಬಿದಂತೆ, ಧ್ವನಿವರ್ಧಕ ವ್ಯವಸ್ಥೆಯ ಮೂಲಕ ಪರ್ವತವೆಲ್ಲ ಹಾಡು ತುಂಬಿ ಸರ್ವತ್ರ ಭಕ್ತಿಯ ಭಾವ ಹರಡಿದ್ದಿತು. ಗಂಪೆಹಾಳೆಂನ ಶ್ರೀ ಶ್ರೀ ಪ್ರಸನ್ನಾನಂದ ಸ್ವಾಮಿಗಳು ಧರ್ಮದ ಸೂಕ್ಷ್ಮತೆಯನ್ನು ವಿವರಿಸಿದರು. ಉಜ್ಜಯಿನಿಯ ಶ್ರೀ ರಂಗನಾಥಾ ಚಾರ್ಯರು ರಾಮಾಯಣ ಮಹಿಮಾ ದರ್ಶನವನ್ನು ವಿವರಿಸಿದರು.

ಅಕ್ಟೋಬರ್ 12 ರಂದು ಬೆಳಗ್ಗೆ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬು ನಾಯುಡು ಅವರು ತಿರುಮಲೆಯ ಆಲಯಕ್ಕೆ ಆಗಮಿಸಿ ಅಲ್ಲಿನ ಸ್ಥಿತಿಗತಿಗಳ ಬಗ್ಗೆ ಪರಿಶೀಲನೆ ನಡೆಸಿ ಮತ್ತು ಉತ್ತಮವಾದ ರೀತಿಯಲ್ಲಿ ಆಲಯವನ್ನೂ ಪರಿಸರವನ್ನೂ ನೋಡಿಕೊಳ್ಳಲು ಹಲವಾರು ಸಲಹೆಗಳನ್ನು ನೀಡಿದರು. ಅದರಂತೆ ಮುಖ್ಯ ಮಂತ್ರಿಗಳ ಸೂಚನೆಗಳನ್ನು ಕಾರ್ಯರೂಪಕ್ಕೆ ತರಲು ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡಳಿಯು ಶ್ರೀ ಪಪ್ಪಲ ಚಲಪತಿರಾವ್ ಅವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಆ ಸೂಚನೆಗಳ ಕಾರ್ಯಾಚರಣೆಯ ಯೋಜನೆ ಕೈಗೆತ್ತಿಕೊಳ್ಳಲು ತೀರ್ಮಾನಿಸಿತು. ಸ್ವಾಮಿ ಆಲಯದ ಪೋಟು ವಿಭಾಗದ ಕಲ್ಲು ಚಪ್ಪಡಿಯ ಹಾಸನ್ನು ಹೊಸದಾಗಿ ಹಾಕಿಸಬೇಕೆಂದು ತೀರ್ಮಾನಿಸಿದರು. ಹೆಚ್ಚಿನ ಪರಿಶುಭ್ರತೆಯನ್ನು ಕಾಯ್ದುಕೊಳ್ಳಲು ಕ್ರಮಗಳನ್ನು ಕೈಗೊಳ್ಳಲು ತೀರ್ಮಾನಿಸಲಾಯಿತು. ಆಲಯದ ಲಾಡು ತಯಾರಿ ಕೇಂದ್ರದ ನೆಲವನ್ನು ಕಲ್ಲು ಹಾಸಿನಿಂದ ಭದ್ರಪಡಿಸಲು ಬೋರ್ಡ್ ಸದಸ್ಯ ಶ್ರೀ ಆದಿಕೇಶವುಲು ಅವರು ಮುಂದೆ ಬಂದರು.

## ಸೂರ್ಯಚಂದ್ರ ವಾಹನಗಳು

13-10-2002 ರಂದು ಭಾನುವಾರ ಸೂರ್ಯ ಚಂದ್ರ ಪ್ರಭವಾಹನಗಳು ಆಕರ್ಷಿಸಿದವು. ಸೂರ್ಯ ಚಂದ್ರರನ್ನು ಸ್ವಾಮಿಯ ನೇತ್ರದ್ವಯ ಎಂದು ಬಣ್ಣಿಸುವುದಿದೆ.

ಸೂರ್ಯರನ್ನು ನಾರಾಯಣನೆಂದೇ ಕರೆಯುವುದುಂಟು; ಕಾರಣ - ಆತ ಕಣ್ಣಿಗೆ

ಕಾಣಿಸುವ ಆಕಾಶಕಾಯ. ಸ್ವಾಮಿ ಅಂದು ಬೆಳಗ್ಗೆ ಶ್ರೀರಂಗನಾಯಕ ಮಂಟಪದಲ್ಲಿ ಪೂಜೆಗಳನ್ನು ಕೈಗೊಂಡು ಸೂರ್ಯಚಂದ್ರ ಪದಕಗಳನ್ನು ಕಿರೀಟದಲ್ಲಿ ಧರಿಸಿ ತಿರುವಾಭರಣಗಳಿಂದ ಅಲಂಕೃತನಾಗಿ ಬೆಣ್ಣೆಯ ಬಿಂದಿಗೆಯನ್ನು ಕೈಲಿ ಹಿಡಿದಂತೆ ಬಂದು ಚಿನ್ನದ ಪೀಠದಲ್ಲಿ ಆಸೀನನಾಗಿರಲು ಅದನ್ನು ಹೊತ್ತ ಸೂರ್ಯ ಮಂಡಲದ ಸೂರ್ಯರಥ ಅರುಣ ಹಾಗೂ ಕುದುರೆಗಳೊಡನೆ ಅಲಂಕೃತವಾಗಿ ಸಿದ್ಧವಾಗಿ ವಾಹನ ಮಂಟಪದಿಂದ ಸೂರ್ಯೋದಯ ಸಮಯಕ್ಕೆ ಸರಿಯಾಗಿ ಹೊರಬಂದು ನಾಲ್ಕು ತೇರಬೀದಿಗಳ ತೆರಳುತ್ತ ಆಕಾಶದಲ್ಲಿ ಸೂರ್ಯನೂ ಸ್ವಾಮಿಯನ್ನು ಅನುಸರಿಸುತ್ತಿರುವನೋ ಎಂಬಂತಿರಲು ಮುಂದೆ ಬಂದು ಭಕ್ತರನ್ನು ಅನುಗ್ರಹಿಸಿದರು.

ಅಂದು ಮಧ್ಯಾಹ್ನ ಬ್ರಹ್ಮೋತ್ಸವದ ಮೂರನೆಯ ತಿರುಮಂಜನ ಶ್ರೀರಂಗನಾಯಕ ಮಂಟಪದಲ್ಲಿ ನಡೆಯಿತು. ಶ್ರೀದೇವಿ ಭೂದೇವಿಯರ ಸಹಿತನಾದ ಸ್ವಾಮಿಯನ್ನು ರಂಗನಾಯಕ ಮಂಟಪದ ಸ್ನಾನಘಟ್ಟದಲ್ಲಿ ಸೇರಿಸಿ ಪರಿಮಳ ಮಂಗಳ ದ್ರವ್ಯಗಳಿಂದ ಸ್ನಾನವನ್ನಾಚರಿಸಿ ವಸ್ತ್ರ ಸಮರ್ಪಣ ಅಲಂಕಾರ ಸಮರ್ಪಣಗಳನ್ನು ಮಾಡಲಾಯಿತು.

ಅಂದು ಸಂಜೆ ಶ್ರೀ ಮಲೆಯಪ್ಪಸ್ವಾಮಿಯನ್ನು ಚಂದ್ರಪ್ರಭವಾಹನದಲ್ಲಿ ಮೆರವಣಿಗೆಯಲ್ಲಿ ಕರೆತರಲಾಯಿತು. ಸೂರ್ಯ ಬಿಸಿಯಾದರೆ ಚಂದ್ರ ತಂಪು - ತಣ್ಗದಿರ. ಮಧ್ಯಾಹ್ನ ಬಿಸಿ ಕಡಿಮೆಯಾಗಿ ಸಂಜೆಯ ತಂಪು ಆವರಿಸುವಾಗ ಚಂದ್ರ ಪ್ರಭವಾಹನ ಸ್ವಾಮಿಯನ್ನು ಹೊತ್ತು ಊರ ಮೆರವಣಿಗೆ ಬಂದಾಗ ಚಂದ್ರನೂ ಆಕಾಶದಲ್ಲಿ ನಿಂತು ನೋಡುವಂತಹ ಶೋಭಾಯಮಾನ ದೃಶ್ಯವಾಗಿದ್ದಿತು. ಮಳೆಯು ಒಂದು ರೀತಿಯ ದಭೆ ದಭೆಯಾದರೂ ಜನ ನಿಂತ ಸ್ಥಳದಿಂದ ಕದಲದೆ ಸ್ವಾಮಿಯನ್ನು ಬರಮಾಡಿಕೊಂಡರು. ರಾತ್ರಿ ಒಂಬತ್ತುಗಂಟೆಗೆ ಆರಂಭವಾದ ಮೆರವಣಿಗೆ ರಾತ್ರಿ ಹನ್ನೊಂದರವರೆಗೆ ನಡೆಯಿತು.

ಆಸ್ಥಾನ ಮಂಟಪದಲ್ಲಿ ಯಥಾವತ್ತು ವೇದಪಾರಾಯಣ, ಗೀತಾ ಪಾರಾಯಣಗಳು ನಡೆದು ಸಂಪನ್ನವಾದವು. ಚೆನ್ನೈನ ಶ್ರೀ ಗೋಟೇಟಿ ರಾಮರಾವ್ ಅವರು ಭಕ್ತಿಯು ಭಗವಂತನನ್ನು ಹೇಗೆ ಭಕ್ತನ ಬಳಿಗೆ ಸೇರಿಸುತ್ತದೆ ಎಂಬುದನ್ನು ಶ್ರೀಕೃಷ್ಣ ಜೀವನ ಚಿತ್ರಣದ ಮೂಲಕ ವಿವರಿಸಿದರೆ, ಶ್ರೀ ಶ್ರೀ ಭಿಕ್ಷುಮಯ್ಯ ಸ್ವಾಮಿಜೀ ಅವರು ಮನುಷ್ಯನಿಗೆ ಐಹಿಕ ಆಧ್ಯಾತ್ಮಿಕ ಉನ್ನತಿಗೆ ಯೋಗಸಾಧನೆಯಿಂದ ಮಾತ್ರವೇ ಸುಲಭ ಮಾರ್ಗ ದೊರೆಯುತ್ತದೆ. ಯೋಗವು ಶಾಸ್ತ್ರವೂ ಹೌದು ಕಲೆಯೂ ಹೌದು; ಹಾಗಾಗಿ ಯಾರು ಹೇಗೆ ಬೇಕಾದರೂ ಯೋಗ ಸಾಧನೆ ಮಾಡಬಹುದು ಎಂದು ಅನುಗ್ರಹ ಮಾಡಿದರು. ಧರ್ಮ ಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್. ಎಸ್. ಬ್ರಹ್ಮಾನಂದ ಅವರು ಮಾತನಾಡುತ್ತ ದೇಹವಾಕ್ ಮನಃ ಶುದ್ಧಿಗಳಿಗಾಗಿ ಆಯುರ್ವೇದ, ವ್ಯಾಕರಣ, ಯೋಗ ಶಾಸ್ತ್ರಗಳನ್ನು ಪತಂಜಲಿ ಮಹರ್ಷಿ ಉದ್ಬೋಧಿಸಿದರೆಂದು ವಿವರಿಸಿದರು. ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟಿನ ಡಾ|| ರಂಗರಾಜನ್ ಅವರು ಮಾತನಾಡುತ್ತ ಆಳ್ವಾರರ ಪಾಶುರಗಳಲ್ಲಿನ ಭಕ್ತಿಯನ್ನು ವಿವರಿಸಿದರು. ಭಾಗವತದಲ್ಲಿ ಬರುವಂತಹ ನಿರ್ಮಮತೆಯನ್ನು ಪುರಾಣ ಪ್ರವಚನ ಕಾಲದಲ್ಲಿ ಶ್ರೀ ಜಿ. ಬಾಲಸುಬ್ರಹ್ಮಣ್ಯ ಶಾಸ್ತ್ರಿ ಅವರು ವಿವರಿಸಿದರು. ಶ್ರೀ ಜಂಧ್ಯಾಲ ಕೃಷ್ಣ ಪಾರ್ವತೀ ಕಲ್ಯಾಣ ಹರಿಕಥೆಯನ್ನು ನಡೆಸಿಕೊಟ್ಟರು.

ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಬೆಂಗಳೂರಿನ ಶ್ರೀ ರಜನಿ, ಶ್ರೀಗಣೇಶ್, ಶ್ರೀ ರಮೇಶರ ನೃತ್ಯ ರಂಜಿಸಿತಾದರೆ ಮಹತಿ ಸಭಾಂಗಣದಲ್ಲಿ ನೆಲ್ಲೂರಿನ ಶ್ರೀಮತಿ ಗಾಯತ್ರಿ ಶಿವಕುಮಾರ್ ಅವರ ನೃತ್ಯ ಪ್ರಸಂಗ ಆಕರ್ಷಿಸಿತು. ಮೂರನೇ ಸತ್ರದಲ್ಲಿಯೂ ತಿರುಮಲೆಯ ಯಾತ್ರಿಕ ಸೌಕರ್ಯ ಸಮುದಾಯದಲ್ಲಿಯೂ ಹರಿಕಥೆಯ ಏರ್ಪಾಡಾಗಿದ್ದಿತು. ಯಾತ್ರಿಕರೆಲ್ಲ ಹರಿಕಥಾಕ್ಷೇಪದಲ್ಲಿ ತಲ್ಲೀನರಾಗಿ ಆನಂದವನ್ನು ಅನುಭವಿಸಿದರು. ಒಟ್ಟು ಕಾರ್ಯಕ್ರಮಗಳು ಬೋಧಕವಾಗಿದ್ದವು.

## ರಥೋತ್ಸವ

14-10-2002 ರಂದು ಸೋಮವಾರ ಬ್ರಹ್ಮೋತ್ಸವದ ಮತ್ತೊಂದು ಮುಖ್ಯ ಘಟ್ಟ. ರಥೋತ್ಸವ - ಬೆಳಗ್ಗೆ ನಡೆಯಿತು. ಅದಕ್ಕಾಗಿ ಅತ್ಯಂತ ಹೆಚ್ಚಿನ ಜನ ಮೊದಲಿಗೇ ಬಂದು ರಾತ್ರಿಯಲ್ಲಿ ತಿರುಪತಿಯ ಚಳಿಯಲ್ಲಿಯೂ ಕಾದು ಕುಳಿತಿದ್ದರೆಂದರೆ ಅವರ ಭಕ್ತಿಯ ಸೀಮೆಯ ಅರಿವಾಗುತ್ತದೆ. ಹಿಂದಿನ ಎರಡು ದಿನಗಳಿಂದಲೇ ರಥವನ್ನು ಈ ಉತ್ಸವಕ್ಕೆಂದು ಸಿದ್ಧಗೊಳಿಸಲಾಗಿದ್ದಿತು. ಈ ಬಾರಿ ಹೊಸದಾದ ಹೈಡ್ರಾಲಿಕ್ ಬ್ರೇಕ್‌ಗಳನ್ನು ರಥಕ್ಕೆ ಅಳವಡಿಸಲಾಗಿದ್ದು, ಅದನ್ನು ಹಿಂದಿನ ದಿನವೇ ಖಾಲಿ ರಥದ ಚಾಲನೆಯಿಂದ ಪರೀಕ್ಷೆಗೂ ಒಳಪಡಿಸಲಾಗಿದ್ದಿತು.

ಸೋಮವಾರ ಪ್ರಾತಃಕಾಲದಲ್ಲಿಯೇ ಮಲೆಯಪ್ಪಸ್ವಾಮಿ ಹಾಗೂ ಶ್ರೀ ಭೂದೇವಿಯರನ್ನು ರಂಗನಾಯಕ ಮಂಟಪದಲ್ಲಿ ಪೂಜಿಸಿ, ಅಲಂಕಾರ ಸಮರ್ಪಣೆ ಮಾಡಿ ರಥ ವಾಹನವನ್ನು ಏರಿಸಲಾಗಿತ್ತು. ಬೆಳಗ್ಗೆ ಸೂರ್ಯೋದಯದ ನಂತರ ನಿಧಾನವಾಗಿ ರಥವನ್ನು ಅದರ ದೊಡ್ಡ ದೊಡ್ಡ ಹಗ್ಗಗಳನ್ನು ಕೈಲಿಹಿಡಿದ ಭಕ್ತರು ಸಾಲುಗಟ್ಟಿ ಎಳೆಯುತ್ತಿದ್ದರೆ, ಹೈಡ್ರಾಲಿಕ್ ಬ್ರೇಕ್ ನಿಯಂತ್ರಣದಿಂದ ನಡೆದ ರಥ ಮುಂದೆ ಸಾಗಿತು. ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ - ಎಂಬ ಮಾತಿನ ಸಾಕ್ಷಾತ್ಕಾರವಾಗುವಂತೆ ಸ್ವಾಮಿ ರಥಿಯಾಗಿದ್ದನು. ಭಕ್ತ ಶರೀರವೇ ರಥವಾದಾಗ ಅದರೊಳಗೆ ಆತ್ಮನಂತೆ ಭಗವಂತ ನಿರುವನೆಂಬುದರ ಪ್ರಾತ್ಯಕ್ಷಿಕೆ ಯೆಂಬಂತೆ ತೋರುತ್ತಿತ್ತು. ಗೋವಿಂದ ನಾಮ ಘೋಷ ಮುಗಿಲು ಮುಟ್ಟುತ್ತಿರಲು ರಥ ಕದಲಿತು. ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಸ್ವಾಮಿಯು ಆಲಯಕ್ಕೆ ಹಿಂದಿರುಗಿದರು.



ಅಂದು ಸಂಜೆ ಅಶ್ವವಾಹನ. ಕುದುರೆ ಪ್ರಾಣದ ಸಂಕೇತವೂ ಹೌದು. ಆತ ಪ್ರಾಣದ ಅಶ್ವವನ್ನು ಆರೋಹಿಸಿದ ಸ್ವಾಮಿ. ತಿರುಮಲೆಯ ಗಿರಿಗಳಲ್ಲಿ ಶ್ರೀನಿವಾಸ ಕುದುರೆಯೇರಿ ಹಾರು ಬೇಟೆಯಲ್ಲಿ ತೊಡಗಿದ್ದ ಎಂಬುದೂ ಪುರಾಣೋಕ್ತ ಪ್ರಸಿದ್ಧ ಸಂಗತಿಯೇ ಆಗಿದೆ. ಹಾಗಾಗಿ ಶ್ರೀ ಮಲೆಯಪ್ಪಸ್ವಾಮಿಯ ವಾಹನಗಳಲ್ಲಿ ಅಶ್ವವೂ ಒಂದಾಗಿರುವುದು ಸಹಜವೂ ಉಚಿತವೂ ಆಗಿದೆಯೆಂದು ಹೇಳಬೇಕು.

ಶ್ರೀ ಎಂ. ವೆಂಕಟರಮಣ ಅವರು ತಾವೂ ಸ್ನೇಹಿತರು ಸೇರಿ ಪ್ರಾಣದಾನ ಟ್ರಸ್ಟ್‌ಗೆ ದು ಲಕ್ಷ ರೂಪಾಯಿಗಳ ಕಾಣಿಕೆ ನೀಡುತ್ತಿರುವುದಾಗಿ ತಿಳಿಸಿ ಆ ಮೊತ್ತದ ಚೆಕ್ ಅನ್ನು ಕಾರ್ಯನಿರ್ವಹಣಾಧಿಕಾರಿಗೆ ತಲುಪಿಸಿದರು.

ಆಸ್ಥಾನ ಮಂಟಪದಲ್ಲಿ ಮುದಿವರ್ತಿ ಕೊಂಡಮಾಚಾರ್ಯರು ಭಗವದ್ಗೀತೆಯನ್ನು ಪಠಿಸಿ ಬೆಳಗನ್ನು ಆಹ್ವಾನಿಸಿದರೆ ಡಾ|| ಎಂ. ವರದರಾಜನ್ ಅವರು ಆಳ್ವಾರರ ಪಾಶುರಗಳಲ್ಲಿ ಪ್ರಪತ್ತಿ ಧರ್ಮವನ್ನು ಶರಣಾಗತಿ ಧರ್ಮವನ್ನು ವಿವರಿಸುತ್ತ ಕುಲಶೇಖರಾಳ್ವಾರರ ತಮಿಳು ಸಂಸ್ಕೃತ ಕೃತಿಗಳ ಸಾರ ಸರ್ವಸ್ವವನ್ನು ಕೇಳುಗರಿಗೆ ಉಣಬಡಿಸಿದರು. ತಿರುಪತಿಯ ಸ್ವಾಮಿ ರೇವತೀ ರಮಣದಾಸರು ಮಹಾತ್ಮರ ಸಂದೇಶದಲ್ಲಿ ಸ್ವಾಮಿಯ ಭಕ್ತ ವಾತ್ಸಲ್ಯವನ್ನು ಚರಿತ್ರೆ ಪುರಾಣಗಳ ಹಿನ್ನೆಲೆಯಲ್ಲಿ ವಿವರಿಸಿದರು. ತಿರುಪತಿಯಲ್ಲಿನ ಮೂರನೇ ಸತ್ರದಲ್ಲಿ ಹಾಗೂ ತಿರುಮಲೆಯ ಯಾತ್ರಿಕ ಸೌಕರ್ಯ ಸಮುದಾಯ ಭವನದಲ್ಲಿ ಹರಿಕಥೆಗಳು ನಡೆದು ಜನವನ್ನು ಆಕರ್ಷಿಸಿದವು.

ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಶ್ರೀಮತಿ ರೇವತೀ ರತ್ನಸ್ವಾಮಿ ಹಾಗೂ ಮಹತಿ ಸಭಾಂಗಣದಲ್ಲಿ ಶ್ರೀ ಎಂ. ಎಸ್. ರಾಮಚಂದ್ರನ್ ಅವರುಗಳ ಸಂಗೀತವೂ, ಸಂಜೆ ಶ್ರೀಮತಿ ಮಾನಸ ಅವರ ನೃತ್ಯವೂ ಶ್ರೀ ಕೆ. ರವಿಕುಮಾರ್ ಅವರ ನೃತ್ಯವೂ ನಡೆದವು.

## ಚಕ್ರಸ್ನಾನ

15-10-2002 ರಂದು ಮಂಗಳ ಬ್ರಹ್ಮೋತ್ಸವದ ಮುಕ್ತಾಯ ಘಟ್ಟ. ಅಂದು ಚಕ್ರಸ್ನಾನ. ಬೆಳಗ್ಗೆ ಆರು ಗಂಟೆಯ ಹೊತ್ತಿಗೇ ಮಲೆಯಪ್ಪಸ್ವಾಮಿ ಉಭಯನಾಯಕಿಯ ರೊಡನೆ ಪುಷ್ಕರಿಣಿಯ ಪಶ್ಚಿಮದಲ್ಲಿರುವ ಶ್ರೀ ವರಾಹಸ್ವಾಮಿ ಆಲಯವನ್ನು ಸೇರಿದರು. ಅಲ್ಲಿ ಆಗಮೋಕ್ತವಾಗಿ ಸ್ವಾಮಿಗೂ ಶ್ರೀ ಭೂದೇವಿಯರಿಗೂ ಕೊನೆಯಲ್ಲಿ ಮೆರವಣಿಗೆ ಯಲ್ಲಿ ಸ್ವಾಮಿಯ ಜೊತೆಗೇ ಆಗಮಿಸಿದ ಶ್ರೀ ಚಕ್ರಕ್ಕೆ - ಸ್ವಾಮಿಯ ಪ್ರತಿನಿಧಿಯ ರೂಪದಲ್ಲಿ ಪುಷ್ಕರಿಣೀ ಸ್ನಾನ ಮಾಡಿಸಲಾಯಿತು. ಮಂಗಳವಾದ್ಯಗಳು ಸುಸ್ವರದಿಂದ ಹಾಡುತ್ತಿರಲು ಸುದರ್ಶನ ಚಕ್ರವನ್ನು ಸ್ವಾಮಿ ಪುಷ್ಕರಿಣಿಯಲ್ಲಿ ಮೂರು ಬಾರಿ ಮುಳುಗಿಸಿ ಮೇಲೆತ್ತಲಾಯಿತು. ಈ ಶುಭಮುಹೂರ್ತವನ್ನು ನೋಡಲು ಬೆಳಗ್ಗೆ ಬಹು ಮುಂಚೆಯೇ ಪುಷ್ಕರಿಣಿಯ ಮೆಟ್ಟಿಲ ಮೇಲೆ ಭಕ್ತರು ಕುಳಿತಿದ್ದರು. ಜೊತೆಗೇ ಪುಷ್ಕರಿಣಿಯಲ್ಲಿ ಭಕ್ತರೂ ಸಹ ಮುಳುಗಿ ಪಾವನರಾದರು.

ಅಂದು ಸಂಜೆ ಸ್ವಾಮಿ ಶ್ರೀದೇವಿ ಭೂದೇವಿಯರೊಡನೆ ಪಲ್ಲಕ್ಕಿಯಲ್ಲಿ ಕುಳಿತು ನಾಲ್ಕು ಮಾಡಬೀದಿಗಳಲ್ಲಿಯೂ ಮೆರವಣಿಗೆ ಯಲ್ಲಿ ಬಂದು ಆಲಯವನ್ನು ಸೇರಿದರು. ಧ್ವಜಸ್ತಂಭ ಮಂಟಪದಲ್ಲಿ ಸ್ವಾಮಿ ಸನ್ನಿಧಿಯಿರಲು ಧ್ವಜಸ್ತಂಭಕ್ಕೆ ತಕ್ಕ ಪೂಜಾದಿಗಳನ್ನು ಸಲ್ಲಿಸಿ ಎಂಟು ದಿನದ ಹಿಂದೆ ಏರಿಸಿದ್ದ ಗರುಡ ಧ್ವಜವನ್ನು ಇಳಿಸಲಾಯಿತು. ನಂತರ ಧ್ವಜಪಟವನ್ನು ಅದರ ಮಾಲೆಯ ಸಮೇತ ಸ್ವಾಮಿಯ ಪಾದಗಳಿಗೆ ಒಪ್ಪಿಸಲಾಯಿತು. ನಂತರ ಮೆರವಣಿಗೆ ತಿರುಮಾಮಣಿ ಮಂಟಪದ ಗರುಡ ಮಂಟಪದವರೆಗೆ ಬಂದು ಸೇರಿತು. ಇಲ್ಲಿ ಶ್ರವಣ ನಕ್ಷತ್ರದ ಪ್ರಯುಕ್ತ ಸ್ವಾಮಿಯ ಆಸ್ಥಾನ ನಡೆಯಿತು. ಸ್ವಾಮಿಯ ಬ್ರಹ್ಮೋತ್ಸವಗಳನ್ನು ನಿರ್ವಹಿಸಿದ ಅರ್ಚಕರ ಮನೆಗೇ ತಿ.ತಿ. ದೇವಸ್ಥಾನಗಳ ಅಧಿಕಾರಿಗಳು ತೆರಳಿ ಸನ್ಮಾನ ಬಹುಮಾನಗಳನ್ನು ನೀಡಿ ಗೌರವಿಸಿದರು.

ಅಂದು ತಿರುಮಲೆಯ ಆಸ್ಥಾನ ಮಂಟಪದಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಮುಕ್ತಾಯದ ದಿನ ಶ್ರೀ ಮುದಿವರ್ತಿ ಕೊಂಡಮಾಚಾರ್ಯರು ಭಗವದ್ಗೀತಾ ಪಾರಾಯಣವನ್ನು ಪೂರ್ಣ ಗೊಳಿಸಿದರು. ವಿಜಯನಗರದ ಶ್ರೀ ಎಂ. ಶೇಷಸಾಯಿ ಅವರು ಆಳ್ವಾರರ ಪ್ರಬಂಧ ಮಾಧುರ್ಯವನ್ನು ಸೋದಾಹರಣ ವಿವರಿಸಿದರು. ವಿಜಯವಾಡದ ಸ್ವಾಮಿ ಶಶಿಕಂಠಾನಂದರು ಅನುಗ್ರಹ ಭಾಷಣ ಮಾಡಿದರು. ಶ್ರೀ ಬಾಲಸುಬ್ರಹ್ಮಣ್ಯ ಶಾಸ್ತ್ರಿಯವರು ಪುರಾಣಪ್ರವಚನ ನಡೆಸಿದರು. ಉಜ್ಜಯಿನಿಯ ರಂಗನಾಥಾಚಾರ್ಯರು ರಾಮಾಯಣದ ವ್ಯಾಖ್ಯಾನದ ಮಂಗಳ ಹಾಡಿದರು. ತಿ.ತಿ.ದೇ. ಉದ್ಯೋಗಿಗಳು ಅನ್ನಮಾಚಾರ್ಯ ಕೃತಿಗಳ ಆಲಾಪನೆ ಮಾಡಿದರು.

ತಿರುಮಲೆಯ ಯಾತ್ರಿಕ ಸೌಕರ್ಯ ಸಮುದಾಯ ಭವನದಲ್ಲಿ ತಿರುಪತಿಯ ಶ್ರೀಮತಿ ಜೆ. ಕೃಷ್ಣಕುಮಾರಿಯವರ ಹರಿಕಥೆ ಕಳೆಗಟ್ಟಿತ್ತು. ಆಸ್ಥಾನ ಮಂಟಪದಲ್ಲಿ ಮುಮ್ಮುಡಿವರಂನ ಶ್ರೀ ಪಿ. ಧರ್ಮಾರಾವ್ ಭಾಗವತರು ಹರಿಕಥೆಯನ್ನು ನಡೆಸಿಕೊಟ್ಟರು. ಬೆಂಗಳೂರಿನ ಪ್ರಾಚಾರ್ಯೆ ಟಿ.ಎಸ್. ರಮಾ ಅವರ ಸಂಗೀತವು ತಿರುಮಲೆಯ ಆಸ್ಥಾನ ಮಂಟಪದಲ್ಲಿ ಚಿತ್ತಾಕರ್ಷಕವಾಗಿದ್ದಿತು. ಕುಮಾರಿ ಸಿವಲ ವಿಜಯದುರ್ಗ ಹಾಗೂ ಶ್ರೀಮತಿ ವಿ.ಕೆ. ಶಶಿಕಲ ಅವರ ನೃತ್ಯಸೇವೆ ಭಕ್ತಿಪ್ರೇರಕವಾಗಿ ನಡೆದವು.

ವಾರ್ಷಿಕ ಬ್ರಹ್ಮೋತ್ಸವ ಸಂದರ್ಭದಲ್ಲಿ ತಿ.ತಿ.ದೇ. ರಿಕಾರ್ಡಿಂಗ್ ಪ್ರಾಜೆಕ್ಟ್ ತಯಾರಿಸಿದ ಮೂರು ವೀಡಿಯೋ ಕ್ಯಾಸೆಟ್‌ಗಳನ್ನು ತಿ.ತಿ.ದೇ. ಅಧ್ಯಕ್ಷರು ಬಿಡುಗಡೆ ಮಾಡಿದರು. ಡಾ|| ಮೇಡಸಾನಿ ಮೋಹನ್ ಅವರ ನೇತೃತ್ವದಲ್ಲಿ ಅನ್ನಮಯ್ಯ ಭವನದಲ್ಲಿ ಈ ಕಾರ್ಯಕ್ರಮ ನಡೆಯಿತು. ತತ್ಸಂದರ್ಭದ ಮೂರು ವೀಡಿಯೋ ಕ್ಯಾಸೆಟ್‌ಗಳೆಂದರೆ ಖ್ಯಾತ ಚಿತ್ರ ಕಲಾವಿದ ಶ್ರೀ ಬಾಪು, ಸಾಹಿತಿ ಮುಳ್ಳ ಪೂಡಿ ವೆಂಕಟರಮಣ ಹಾಗೂ ಗಾಯಕ ಶ್ರೀ ಎಸ್.ಪಿ.

ಬಾಲಸುಬ್ರಹ್ಮಣ್ಯಂ ತಯಾರಿಸಿದ 'ಶ್ರೀವಾರಿ ಬ್ರಹ್ಮೋತ್ಸವಾಲು', ಕೂಚಿಪುಡಿ ನೃತ್ಯಗಾರ್ತಿ ಶ್ರೀಮತಿ ಶೋಭಾನಾಯುಡು ತಯಾರಿಸಿದ ''ಶ್ರೀಕೃಷ್ಣಂ ವಂದೇ ಜಗದ್ಗುರುಂ'', ಕೂಚಿಪುಡಿ ನೃತ್ಯನಾಟಕ 'ಶ್ರೀಕೃಷ್ಣ ಪಾರಿಜಾತಂ' - ಜೊತೆಗೆ ಕೃಷಿ ಮಲ್ಟಿ ಮೀಡಿಯಾ ಸಂಸ್ಥೆಯವರು ತಯಾರಿಸಿದ 'ಶ್ರೀ ವಿಷ್ಣುಸಹಸ್ರನಾಮ' ಸಿ.ಡಿ. ಯನ್ನೂ ಬಿಡುಗಡೆ ಮಾಡಲಾಯಿತು.

ಪಶ್ಚಿಮ ಗೋದಾವರಿ ಜಿಲ್ಲೆಯ ಮಂಡಪೇಟದ ಸುಬ್ಬಾರಾವ್ ಎನ್ನುವ ಭಕ್ತರು ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಗೆ ಐದು ಲಕ್ಷ ರೂಪಾಯಿಗಳನ್ನು ಅನ್ನಮಯ್ಯ ಭವನದಲ್ಲಿ ತಿ.ತಿ.ದೇ. ಅಧ್ಯಕ್ಷ ಶ್ರೀ ಪಿ. ಚಲಪತಿರಾವ್ ಅವರಿಗೆ ಸಮರ್ಪಿಸಿದರು.

## ಅಂಕಿ ಸಂಖ್ಯೆಗಳು

ಈ ಬಾರಿ ಬ್ರಹ್ಮೋತ್ಸವಗಳಲ್ಲಿ ಸ್ವಾಮಿಯ ಆದಾಯ ಆರೂಪರೆ ಕೋಟಿ ರೂಪಾಯಿಗಿಂತ ಸ್ವಲ್ಪ ಹೆಚ್ಚು ಎಂದು ವರದಿಯಾಗಿದೆ. ಇದರಲ್ಲಿ ಹುಂಡಿಯ ಮೂಲಕ 4,10,57,500 ರೂಗಳೂ, ಆರ್ಜಿತ ಸೇವೆಗಳ ಮೂಲಕ 1,53,24,560 ರೂಗಳೂ ಪ್ರಸಾದಗಳ ಮಾರಾಟದ ಮೂಲಕ 95,12547 ರೂಗಳೂ (ಒಟ್ಟು 6,58,94,607 ರೂಗಳು) ಆದಾಯವಾಗಿದೆ. ಉಚಿತ ದರ್ಶನ ಪಡೆದವರು 1,74,162 ಮಂದಿ ಯಾದರೆ ಪ್ರತ್ಯೇಕ ಪ್ರವೇಶದ ಟಿಕೇಟ್ ಪಡೆದು ದರ್ಶನ ಪಡೆದವರು 2,13,[illegible]37 ಮಂದಿ. [illegible] ಶ್ರೀ ವೆಂಕಟೇಶ್ವರಸ್ವಾಮಿ ನಿತ್ಯಾನ್ನದಾನ ಯೋಜನೆಯಲ್ಲಿ ಸ್ವಾಮಿ ದರ್ಶನಾನಂತರ ಊಟಮಾಡಿದವರು 2,62,030 ಮಂದಿ. ಉಚಿತ ಲಾಡುಗಳು 4,10,000 ವಿತರಣೆಯಾದರೆ ಉಚಿತ ಪುಳಿಯೋಗರೆ ಪೊಟ್ಟಣ ಪಡೆದ ಭಕ್ತರು 1,64,485 ಮಂದಿ. ತಿ.ತಿ.ದೇ. ಪುಸ್ತಕ ಕ್ಯಾಸೆಟ್‌ಗಳ ಮಾರಾಟದಲ್ಲಿನ ವ್ಯವಹಾರ 1,06,425 ರೂಪಾಯಿಗಳದ್ದು, ಭಾಗವಹಿಸಿದ ಸ್ಕೌಟ್‌ಗೈಡ್‌ಗಳು 900 ಮಂದಿ (ಕರ್ನಾಟಕ ತಮಿಳುನಾಡು ಆಂಧ್ರಪ್ರದೇಶ ರಾಜ್ಯಗಳಿಂದ) ಮುಡಿಕೊಟ್ಟ ಭಕ್ತರು 1,64,485 ಮಂದಿ. ಉಚಿತ ವೈದ್ಯ ಸೌಲಭ್ಯ ಪಡೆದವರು 34000 ಮಂದಿ ಯಾದರೆ ಬಳಕೆಯಾದ ನೀರು 281 ಲಕ್ಷ ಗ್ಯಾಲನ್.

## ಶ್ರೀವಾರಿ ಸೇವೆ

ಈ ಬಾರಿಯ ಮತ್ತೊಂದು ವೈಶಿಷ್ಟ್ಯವೆಂದರೆ ಸ್ವಾಮಿ ಸೇವೆಯಲ್ಲಿ ಭಾಗವಾಗಿ ಯಾತ್ರಿಕ ಸೇವೆ ಮಾಡಿದ ಶ್ರೀವಾರಿ ಸೇವಾ ಪಡೆಯದು ಎನ್ನಬೇಕು. ಬ್ರಹ್ಮೋತ್ಸವದ ಹತ್ತು ದಿನಗಳಲ್ಲಿ ಒಟ್ಟು 1027 ಮಂದಿ ಶ್ರೀವಾರಿ ಸೇವೆಯಲ್ಲಿ ಸರಾಸರಿ 9263 ಮಾನವ ಗಂಟೆಗಳ ವ್ಯವಧಿಯ ಸೇವೆಯನ್ನು ಸಲ್ಲಿಸಿದ್ದಾರೆ. ಹೋದ ಬಾರಿಯ ಬ್ರಹ್ಮೋತ್ಸವಗಳಲ್ಲಿ 478 ಮಂದಿ ಶ್ರೀವಾರಿ ಸೇವೆ (ಒಟ್ಟು 4202 ಮಾನವಗಂಟೆಗಳ ಸೇವೆ) ಸಲ್ಲಿಸಿದ್ದರೆ ಈ ಬಾರಿ ಅದು ದುಪ್ಪಟ್ಟು ಮುಪ್ಪುರಿಯಾಗಿ ಹೆಚ್ಚಿದೆಯೆಂದು ಹೇಳಬಹುದು. ಪೌರ ಸಂಬಂಧಾಧಿಕಾರಿ ಡಾ|| ಪಿ. ರಂಗಯ್ಯನವರ ಮೇಲುಸ್ತುವಾರಿಯಲ್ಲಿ, ಉಪ ಪೌರಸಂಬಂಧಾಧಿಕಾರಿ ಶ್ರೀ ಚಂದ್ರಶೇಖರ ನಾಯುಡು ಅವರ ನಿರ್ದೇಶನದಲ್ಲಿ ಶ್ರೀವಾರಿ ಸೇವೆಯ ಸ್ವಯಂಸೇವಕರು ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್, ಕಲ್ಯಾಣಕಟ್ಟೆ, ವೈಕುಂಠಂ ಕ್ಯೂ ಕಾಂಪ್ಲೆಕ್ಸ್, ಯಾತ್ರಿಕ ಸೌಕರ್ಯ ಸಮುದಾಯ ಭವನ, ವಿಜಯಾಬ್ಯಾಂಕ್ ಕೌಂಟರ್, ಎಸ್. ವಿ. ಜಿ. ಎಚ್. ಕೌಂಟರ್, ಶ್ರೀ ವರಾಹಸ್ವಾಮಿ ದೇವಾಲಯ, ಉದ್ಯಾನವನ ವಿಭಾಗ, ಎಲೆಕ್ಟ್ರಿಕ್ ವಿಭಾಗ, ಶ್ರೀ ವೆಂಕಟೇಶ್ವರ ಮ್ಯೂಸಿಯಂ, ಲಗ್ಗೇಜು ಭದ್ರತಾ ಕೇಂದ್ರ - ಮುಂತಾದ ಕಡೆಗಳಲ್ಲಿ ಕೆಲಸ ಮಾಡಿದ್ದೇ ಅಲ್ಲದೆ, ರಕ್ಷಣೆ ಮತ್ತು ನಿಗಾ ವಿಭಾಗದಲ್ಲಿಯೂ ನೆರವು ನೀಡಿದರು. ಹೀಗೆ ಒಟ್ಟು ಹದಿಮೂರು ಸ್ಥಳಗಳಲ್ಲಿ ಅವರ ಸೇವೆಯನ್ನು ವಿನಿಯೋಗಿಸಿಕೊಳ್ಳಲಾಯಿತು. ಸುಮಾರು ಹನ್ನೆರಡಕ್ಕೂ ಹೆಚ್ಚಿನ ಬೃಂದಗಳು ಒಟ್ಟು ಹತ್ತೂ ದಿನವೂ ಬೆಳಗ್ಗೆ ಸಂಜೆಗಳ ನಾಲ್ಕು ಗಂಟೆಯ ಷಿಫ್ಟ್‌ಗಳಲ್ಲಿ (ದಿನಕ್ಕೆ ಎಂಟರಿಂದ ಹತ್ತುಗಂಟೆಗಳ ಸೇವಾ ವ್ಯವಧಿ) ಕೆಲಸ ಮಾಡಿದವು. ಇವುಗಳಲ್ಲಿ ಚಿನ್ನಜೀಯರ್ ಸ್ವಾಮಿಗಳ ವಿಕಾಸ ತರಂಗಿಣಿಯವರ ಸಂಖ್ಯೆ ಅತ್ಯಧಿಕವೆಂಬುದು ಗಮನಾರ್ಹ. ಕಾರ್ಯನಿರ್ವಹಣಾಧಿಕಾರಿಗಳು ಉತ್ತೇಜನ ನೀಡಿದರು. ಅಲ್ಲದೆ ಪೌರಸಂಬಂಧಾಧಿಕಾರಿಗಳ ಪ್ರಯತ್ನವೂ ಕಾರ್ಯಕರ್ತರಿಗೆ ಉತ್ಸಾಹ ತುಂಬಿದ್ದಿತು ಎಂದೂ ಹೇಳಬಹುದು.

★★★★★



ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
ಸಂಶೋಧನ ಕೇಂದ್ರ - ತಿರುಪತಿ

## ಒಂದು ವಿನಂತಿ

ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕ ಭಂಡಾರವಾಗಿ, ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶಹೊಂದಿದೆ. ಈಗ 40,000 ಕ್ಕಿಂತ ಹೆಚ್ಚು ಪುಸ್ತಕಗಳಿವೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ರೀತಿಯ, ತತ್ತ್ವ, ಧರ್ಮ, ಸಂಗೀತವೇ - ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ, ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -

ವಿಶೇಷಾಧಿಕಾರಿ,
ಶ್ರೀ ವೆಂಕಟೇಶ್ವರಕೇಂದ್ರ ಗ್ರಂಥಾಲಯ
ಹಾಗೂ
ಸಂಶೋಧನ ಕೇಂದ್ರ
ತಿರುಪತಿ - 517 502.

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

**ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ.ಟಿ.ರಸ್ತೆ, ತಿರುಪತಿ, (ಆಂ.ಪ್ರ.),**

**(ನೋಂದಣಿ ಸಂಖ್ಯೆ - 18/94)**

**ಡಾ॥ ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮ ದೇಶದಲ್ಲಿ [illegible]ರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, [illegible] ಹಾಗೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾನಿಗಳ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

ಈ ಯೋಜನೆಯ ವಿವರಗಳು :

I. ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದು ಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1. ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.
2. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.
3. ದಾನಿಯ ಐದುಮಂದಿಗೆ ಉಚಿತವಾಗಿ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು. ವರ್ಷಕ್ಕೆ ಒಮ್ಮೆ ಉತ್ತರೀಯ ಬಹುಮಾನ ನೀಡಲಾಗುವುದು.
5. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

II. ಎಸ್. ವಿ. ನಿತ್ಯಾನ್ನದಾನಯೋಜನೆಗೆ ತಮ್ಮ ವಂತಿಗೆಯಾಗಿ ಒಂದು ಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಬಹುದಾಗಿದೆ.

**ದಾನಗಳನ್ನು ಹೇಗೆ ಕಳುಹಿಸಬೇಕು :**

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ. ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :
**ಕಾರ್ಯನಿರ್ವಹಣಾಧಿಕಾರಿ,**
ತಿ.ತಿ.ದೇ. ಪರಿಪಾಲನಾಭವನ - ತಿರುಪತಿ - 517 501.

# ಹರಿದಾಸ ಪರಂಪರೆ

- ಡಾ|| ರಾಜಶ್ರೀ ಕಿಶೋರ್.

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ಒಂದಾದ ದಾಸಸಾಹಿತ್ಯ ಮೆರೆದುದು ಕರ್ನಾಟಕದ ಬಯಲು ಪ್ರದೇಶವೆಂದು ಕರೆಯಲ್ಪಡುವ ರಾಯಚೂರು ಮತ್ತು ಹಲವು ಪ್ರದೇಶಗಳಲ್ಲಿ. ಹಲವು ಶರಣರು ಮತ್ತು ದಾಸರು ಸಂಚರಿಸಿ ತಮ್ಮ ತತ್ವಗಳನ್ನು ಬಿತ್ತಿದ ಫಲವತ್ತಾದ ಸಾಹಿತ್ಯದ ಭೂಮಿಯಾಗಿದೆ. ಅಸಂಖ್ಯ ಕಾಳುಗಳೆಂಬ ತತ್ವಗಳನ್ನು ಒಳಗೊಂಡ ಆಧ್ಯಾತ್ಮಿಕ ಸಂಘಟನೆಯ ಗಟ್ಟಿತೆನೆ ಯಂತಿರುವುದು ದಾಸಸಾಹಿತ್ಯ.

ದ್ವೈತಮತದ ಪ್ರತಿಪಾದಕರಾದ ಮಧ್ವಾಚಾರ್ಯರಿಂದ ಪ್ರೇರಿತವಾದ ಕರ್ನಾಟಕದ ಹರಿದಾಸ ಪಂಥ, ಕೆಲವೆಡೆ ನಿಂತು ಹೋದಂತೆ ಭಾಸವಾದರೂ ಎಲ್ಲಿಯೂ ನಿಲ್ಲದೆ ಒಂದು ಸುದೀರ್ಘ ಪರಂಪರೆಯನ್ನು ನಿರ್ಮಾಣ ಮಾಡಿದೆ. ಆ ಪರಂಪರೆ ಪ್ರಸ್ತುತದಲ್ಲಿಯೂ ನಿಲ್ಲದೇ ತನ್ನದೇ ಆದ ಅಸ್ತಿತ್ವದಲ್ಲಿ ಮುಂದುವರಿದಿದೆ. ಈ ಹರಿದಾಸ ಪಂಥವನ್ನು ಪ್ರಮುಖವಾಗಿ ಮೂರು ಹಂತಗಳಲ್ಲಿ ವಿಬಾಗಿಸಬಹುದು.

1. ನರಹರಿ ತೀರ್ಥರಿಂದ ಪುರಂದರ-ಕನಕದಾಸರವರೆಗೆ.
2. ವಿಜಯದಾಸರಿಂದ ಪ್ರಾಣೇಶ ದಾಸರವರೆಗೆ.
3. ಪ್ರಾಣೇಶದಾಸರಿಂದ ಪ್ರಾರಂಭವಾಗಿ ಇತ್ತೀಚಿನವರೆಗೆ.

ನರಹರಿತೀರ್ಥರು ಮಠಾಧೀಶರಾಗಿ ಕನ್ನಡದಲ್ಲಿ ಮೊದಲು ಕೀರ್ತನೆಗಳನ್ನು ರಚಿಸಿ ದಾಸಕೂಟದ ಮೂಲ ಪುರುಷರು ಎಂಬ ಕೀರ್ತಿಗೆ ಪಾತ್ರರಾದರೆ, ಮಠಾಧೀಶರಾಗಿದ್ದುಕೊಂಡೇ, ದೇವತಾ ಪೂಜೆಯಲ್ಲಿ ಪಾಲ್ಗೊಳ್ಳುತ್ತಾ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ, ಹಾಡಿದ ಕೀರ್ತಿ ಶ್ರೀಪಾದರಾಜರದು. ಇವರಿಬ್ಬರ ನಡುವೆ ಬಂದರೆಂದು ಊಹಿಸಲಾದ ಆದ್ಯರು ಹರಿದಾಸ ಸಾಹಿತ್ಯಕ್ಕೆ 'ಉಗಾಭೋಗ'ಗಳೆಂಬ ಪ್ರಕಾರಗಳನ್ನು ನೀಡಲು ಕಾರಣರಾದರು. 'ಸುಳಾದಿ' ಪ್ರಕಾರದ ಕರ್ತೃವಾದ ಶ್ರೀಪಾದರಾಜರು ಭ್ರಮರಗೀತೆ, ವೇಣುಗೀತೆ, ಗೋಪಿಗೀತೆ, ದಂಡಕ, ವೃತ್ತನಾಮ ಮುಂತಾದ ರೀತಿಯಲ್ಲಿ ಕೃತಿರಚನೆಯಲ್ಲಿ ಮೊದಲಿಗರೆನಿಸಿದರು. ರಚಿಸಿದ ಕನ್ನಡ ಕೃತಿಗಳಲ್ಲಿ ಗೇಯತೆ, ಪ್ರಾಸ, ಪದಲಾಲಿತ್ಯ, ಅಲಂಕಾರ ಪ್ರೌಢಿಮೆ,



ಶೃಂಗಾರ, ಶಾಂತಿ, ಭಕ್ತಿರಸಗಳ ನಿರೂಪಣೆ ಭಕ್ತ ಹೃದಯವನ್ನು ಆಕರ್ಷಿಸುತ್ತವೆ. ಇವು 'ರಂಗವಿಠಲ' ಎಂಬ ಮುದ್ರಿಕೆಗಳಲ್ಲಿ ರಚಿತ ವಾಗಿವೆ. ಭಾಗವತದ ಕೃಷ್ಣಕಥೆಯನ್ನು ಚಿಕ್ಕ ಚಿಕ್ಕ ಪದಗಳಲ್ಲಿ ತುಂಬಾ ರಸವತ್ತಾದ ಸಾಹಿತ್ಯ ವಾಗಿಸಲಾಗಿದೆ.

ಶ್ರೀಪಾದರಾಜರಿಂದ ಅನೇಕ ಬಗೆಯಲ್ಲಿ ನಡೆದ ಸಾಹಿತ್ಯ, ಭಕ್ತಿಯ ಮೂಲಕ ಸಾಹಿತ್ಯದ ದೃಷ್ಟಿಯಿಂದ ಅಭಿವೃದ್ಧಿ ಹೊಂದಿದ್ದು ವ್ಯಾಸರಾಜರಿಂದ. (ಕ್ರಿ.ಶ.ಸು. 1447-1539) ವ್ಯಾಸರಾಯ ಮಠದ ಸ್ವಾಮಿಯಾಗಿ, ತಮ್ಮಲ್ಲಿರುವ ಶ್ರೀಪಾದರಾಜರ ಕೀರ್ತನೆಯ ಹೊಸ ಸಂಪ್ರದಾಯವನ್ನು ಭಕ್ತಿ, ಶ್ರದ್ಧೆಯಿಂದ ಮುಂದುವರೆಸಿದರು. ವಿಜಯನಗರ ಸಾಮ್ರಾಜ್ಯದ ಆರಂಭಕ್ಕೆ ವಿದ್ಯಾರಣ್ಯ ಕಾರಣರೆನಿಸಿದರೆ, ಸಾಮ್ರಾಜ್ಯದ ಆಂತರಿಕ ಶಕ್ತಿಯಾಗಿ ಕ್ಷತ್ರಿಯ ತೇಜಸ್ಸಿಗೆ ಬ್ರಹ್ಮತೇಜಸ್ಸು ಶ್ರೀವ್ಯಾಸರಾಜರಾದರು. ಕೃಷ್ಣದೇವರಾಯನ ರಾಜಗುರುಗಳಾಗಿ ದಾಸಸಾಹಿತ್ಯ ರಾಜಾಶ್ರಯ ಪಡೆಯು ವಂತಾಯಿತು. ಇವರ ಕಾಲದವರೆಗೆ ಹರಿದಾಸ ಪರಂಪರೆಯೆಂಬುದು 'ಕೂಟ'ದ ರೂಪದಲ್ಲಿರಲಿಲ್ಲ. ವ್ಯವಸ್ಥಿತ ಸಂಘಟನೆಯಲ್ಲಿ 'ದಾಸಕೂಟ', ವ್ಯಾಸಕೂಟವನ್ನು ರಚಿಸಿದರು. ವೇದೋಪನಿಷತ್ತುಗಳ ಅರ್ಥವನ್ನು ಭಕ್ತಿ ಜಾಗೃತಿಯನ್ನು ಬೀದಿ ಬೀದಿಗಳಲ್ಲಿ ಸಂಚರಿಸಿ ಕೀರ್ತನೆಗಳ ಮೂಲಕ ಹೇಳತೊಡಗಿದರು. ಪುರಂದರದಾಸರು, ಕನಕದಾಸರು ಇಬ್ಬರೂ ವ್ಯಾಸರಾಯರ ದಾಸಕೂಟದಲ್ಲಿಯ ಶ್ರೇಷ್ಠ ಶಿಷ್ಯರಾಗಿ ಕನ್ನಡ ಸಾಹಿತ್ಯದ ಸಿರಿವಂತಿಕೆಯ ಕಳಶಗಳಾದರು. ಉಪಲಬ್ಧವಾದ ಇವರ ಸಾಹಿತ್ಯದಲ್ಲಿ ಭಕ್ತಿ ನಿರ್ಭರತೆ, ಸಂಗೀತಜ್ಞಾನ, ಜನತಾದೃಷ್ಟಿಗಳನ್ನು ಕಾಣಬಹುದಾಗಿದೆ. ಗಾತ್ರವೇ ಮಂದಿರ, ಹೃದಯವೇ ಮಂಟಪ, ನೇತ್ರವೇ ಮಹದೀಪ ಎಂಬ ಮಾನಸ ಪೂಜೆಯ ರೂಪಕಗಳು ಆಗಾಧ.

ಧಾರ್ಮಿಕ ಪರಿಸರದ ಕೃಷ್ಣನ ಕ್ಷೇತ್ರವಾದ ಉಡುಪಿಯಲ್ಲಿ ಕನ್ನಡ ಕೀರ್ತನೆಗಳ ರಚನೆಗೆ ತೊಡಗಿದ ಮತ್ತೊಬ್ಬರೆಂದರೆ ಹರಿದಾಸ ಪರಂಪರೆಯ ವಾದಿರಾಜರು (ಸೋದೆ ಮಠದ ಸ್ವಾಮಿಗಳು) ಇವರ ಕಾಲದಲ್ಲಿ ದಾಸಸಾಹಿತ್ಯದ ಕ್ಷೇತ್ರವಲಯ ವಿಸ್ತಾರಗೊಂಡಿತು. ತತ್ವಜ್ಞಾನ ವನ್ನು ಜನಸಾಮಾನ್ಯರಿಗೆ ತಲುಪಿಸಬೇಕೆಂಬ ಹರಿದಾಸ ಸಾಹಿತ್ಯಕ್ಕೆ ಇವರು ತುಳು ಭಾಷೆಯಲ್ಲಿ ರಚಿಸಿದ 'ದಶಾವತಾರ ಸ್ತೋತ್ರ' ಅಪರೂಪದ ಕೊಡುಗೆ. ಸಂಸ್ಕೃತದಲ್ಲಿ ಹದಿನಾರು ಗ್ರಂಥಗಳನ್ನು ರಚಿಸಿದ ಇವರು, ಕನ್ನಡದಲ್ಲಿ ವೈಕುಂಠವರ್ಣನೆ, ಲಕ್ಷ್ಮೀ ಶೋಭಾನೆ, ಸ್ವಪ್ನಪದ, ಕೀಚಕವಧ, ಕೇಶವನಾಮ, ಗುಂಡಕ್ರಿಯಗಳಲ್ಲದೇ ಹಲವು ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ಹಯವದನ ಮುದ್ರಿಕೆಯಲ್ಲಿ ರಚಿಸಿದ್ದಾರೆ. ಶಾಸ್ತ್ರೀಯ ಯುಕ್ತಿಗಳನ್ನು ಸರಳ ಕನ್ನಡದಲ್ಲಿ ರಚಿಸಿ ಭಕ್ತಿಯಿಂದ ಶ್ರೀಹರಿಯನ್ನು ಒಲಿಸಿ, ಮುಕ್ತಿಯನ್ನು ಪಡೆಯಬೇಕೆಂಬುದು ಇವರ ಸಿದ್ಧಾಂತ.

ಹರಿದಾಸ ಪರಂಪರೆಯಲ್ಲಿಯೇ ಹೆಚ್ಚು ಸಂಖ್ಯೆಯಲ್ಲಿ ಕೃತಿಯಲ್ಲಿ ರಚಿಸಿ ದಾಸಶ್ರೇಷ್ಠರೆನಿಸಿದವರು ಪುರಂದರದಾಸರು. ವ್ಯಾಸರಾಜರಿಂದ ಮಂತ್ರೋಪದೇಶಗಳನ್ನು ಪಡೆದು ದಾಸರಾಗಿ, ತಮ್ಮ ಜೀವನವೆಲ್ಲ ಹರಿಗೆ ಸಮರ್ಪಿಸಿದರು. ಪುರಂದರದಾಸರೇ ಬರೆದ ಕೀರ್ತನೆಗಳು 4,75,000 ಎಂದು ಅವರೇ ಹೇಳಿದ್ದರೂ, ಸಧ್ಯ ಲಭ್ಯವಾಗಿದ್ದು, ಒಂದು ಸಾವಿರದ ಮೇಲೆ ಪ್ರಕಟಗೊಂಡ ಕೀರ್ತನೆಗಳಿವೆ. ಈ ಸಂಗತಿಯನ್ನು ಹೆಚ್ಚಿನ ಸಾಮಾಗ್ರಿ, ಆಧಾರಗಳಿಂದ ಸಂಶೋಧನೆಗೆ ಒಳಪಡಬೇಕಾಗಿದೆ.

ಪುರಂದರದಾಸರ ಕೀರ್ತನೆಗಳಲ್ಲಿ ನಾಮ ಮಹಿಮೆ, ಹರಿಗುರುಗಳ ಸ್ಮರಣೆ - ಸ್ತುತಿ, ಕೃಷ್ಣಲೀಲೆ, ಅಂತರಂಗ ನಿವೇದನೆ, ಸಮಾಜದ ವಿಮರ್ಶೆ, ವಿಡಂಬನೆ, ಬೋಧನೆ ನಾನಾ ರೀತಿಯಲ್ಲಿ ವ್ಯಕ್ತಿತ್ವದ ಏಕಸೂತ್ರವು ವಿವಿಧ ವಿಷಯಗಳನ್ನು ಒಂದುಗೂಳಿಸಿದೆ. ವಿಷಯ ರೀತಿ - ನೀತಿಗಳ ಸಂಗಮಗಳು ಸೊಗಸಾಗಿ, ಅದ್ಭುತವಾಗಿ ಮೂಡಿ ಬಂದಿವೆ. 'ನಾರಾಯಣ ನಿಮ್ಮ ನಾಮದ ಸ್ಮರಣೆಯ ಸಾರಾಮೃತ ನಾಲಿಗೆಗೆ ಬರಲಿ' ಎಂಬಲ್ಲಿ ಕಲ್ಪನಾಶಕ್ತಿ ಅಂತರಂಗದ ಬಯಕೆ ಉತ್ಕಟತೆಯ ಅಭಿವ್ಯಕ್ತಿ ಇಲ್ಲಿದೆ. ಕೆಲವು ಸಾರಿ ಸಲುಗೆಯ ಭಕ್ತಿಯಲ್ಲಿ 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ', 'ಯಾದವ ನೀ ಬಾ ಯದುಕುಲ ನಂದನ', 'ಮೂರುತಿಯನು ನಿಲ್ಲಿಸೋ' - ಮುಂತಾದವುಗಳ ಪ್ರಾಸಗಳಿಂದ ಇನ್ನೂ ಸಾಹಿತ್ಯದ ಸತ್ವ ಹೆಚ್ಚುತ್ತದೆ. ಉದಾ: ಭಾಗ್ಯದ ಲಕ್ಷ್ಮೀಬಾರಮ್ಮ ಹಾಡಿನಲ್ಲಿ 'ಹೆಜ್ಜೆಯ ಮೇಲೊಂದು ಹೆಜ್ಜೆಯ ನಿಕ್ಕುತ ಗೆಜ್ಜೆಕಾಲ್ಗಳ ಧ್ವನಿಯ ತೋರುತ ಸಜ್ಜನ ಸಾಧು ಪೂಜೆಯ ವೇಳೆಗೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ' ಮುಂತಾದವು.

ಕರ್ನಾಟಕ ಸಂಗೀತಕ್ಕೊಂದು ಹೊಸ ಆಯಾಮ ನೀಡಿದ್ದಲ್ಲದೇ ವೇದಾಂತ ಮತ್ತು ಜನಸಾಮಾನ್ಯರನ್ನು ಬೆಸೆದರು. ಕಲ್ಪಕತೆಯಲ್ಲಿ ಹರಿ ನಿನ್ನೊಲುಮೆಯು ಆಗುವತನಕ ಹ್ಯಾಗೆ ಮೆಚ್ಚಿಸಲಿ, - ಎಂದು ಹಾಡಿದರೆ, ನಾ ನಿನ್ನ ಧ್ಯಾನದೊಳಿರಲು ಎಂಬುದು ಅಸಾಧಾರಣ ಚೈತನ್ಯದ ಅಭಯವಾಣಿಯಾಗಿ ಪುರಂದರ ದಾಸರ ಹಿರಿಮೆಯನ್ನು ಸಾರುತ್ತದೆ. ನಾನಿನ್ನೊಳು ಏನೂ ಬೇಡುವುದಿಲ್ಲ ಎನ್ನ ಹೃದಯ ಕಮಲದಲಿ ನಿಂದಿರು ಹರಿಯೆ, ಕಂಡು ಕಂಡು ನೀ ಎನ್ನ ಕೈಬಿಡುವೆರೇ ಕೃಷ್ಣಾ, ಸಕಲ ಗ್ರಹಬಲ ನೀನೆ ಸರಸಿಜಾಕ್ಷ, ಹ್ಯಾಗೆ ಮೆಚ್ಚಿಸಲಿ ಹ್ಯಾಗೆ ಅರ್ಚಿಸಲಿ ನಿನ್ನ, ಬಂದದ್ದೆಲ್ಲ ಬರಲಿ ಗೋವಿಂದನ ದಯೆ, ಕಾಯಲಾರೆನು ಕೃಷ್ಣ ಕಂಡವರ ಬಾಗಿಲು, ಮುಂತಾದ ಕೀರ್ತನೆಗಳಲ್ಲಿ ಆರ್ತ ಭಕ್ತನ ಕೋರಿಕೆ ತಳಮಳ, ಸಾಕ್ಷಾತ್ಕಾರ, ನಿರ್ಭೀತಿ, ನಿಶ್ಚಿಂತೆ, ಭಕ್ತನ ಸಮಗ್ರ ಸಮರ್ಪಣೆ ಮುಂತಾದ ಅಂಶಗಳನ್ನೊಳಗೊಂಡ ಕೀರ್ತನೆಗಳ ಭಾವಗೀತೆಯ ಸುಂದರ ರೂಪ ತಾಳುತ್ತವೆ.

ಭಾಗವತ ಪುರಾಣದ ಕೃಷ್ಣಲೀಲೆಗಳನ್ನು ಕೀರ್ತನೆಯಲ್ಲಿ ಹಲವಾರು ಸನ್ನಿವೇಶಗಳು 'ಆಡಿದನು ರಂಗ ಅದ್ಭುತದಿಂದಲಿ ಕಾಳಿಂಗನ ಫಣಿಯಲಿ', 'ಹೋಗದಿರಲೋ ರಂಗ

ಬಾಗಿಲಿಂದಾಚೆ', 'ರಂಗನೊಲಿದಾ ನಮ್ಮ ಕೃಷ್ಣನೊಲಿದಾ' - ಮುಂತಾದವುಗಳಲ್ಲಿ ಕಥನ, ನಾಟ್ಯ, ನಿರೂಪಣೆ, ಸಾಂಕೇತಿಕ ಧ್ವನಿ ತೋರಿದರೆ, ಕೆಲವು ಕೀರ್ತನೆಗಳಲ್ಲಿ ಸಮಾಜದ ಜೀವನ, ಬೋಧನೆಗಳು ಕಂಡು ಬರುತ್ತವೆ. ನಗೆಯು ಬರುತಿದೆ, ಮೂರ್ಖರಾದರು ಜನರು ಲೋಕದೊಳು, ಜಾಲಿಯ ಮರದಂತೆ ಧರೆಯೊಳು ದುರ್ಜನರು, ಕೇಳನೋ ಹರಿ ತಾಳನೋ, ಇಬ್ಬರ ಹೆಂಡಿರ ಸುಖವ ಇಂದು ಕಂಡೆನಯ್ಯಾ - ಮುಂತಾದವು ಮೂಡಿ ಬಂದಿವೆ. ಸಮಾಜದ ಅನೀತಿ ಡಾಂಭಿಕತೆ, ಗೊಡ್ಡು ಆಚರಣೆಗಳನ್ನು ಖಂಡಿಸಿದ್ದಾರೆ. ಈಸಬೇಕು ಇದ್ದು ಜೈಸಬೇಕು, ಮಾನವ ಜನ್ಮದೊಡ್ಡದು ಮುಂತಾದವುಗಳಲ್ಲಿ ಸಮಾಜಬೋಧನೆ, ಗಾದೆಗಳು ಉಕ್ತವಾಗಿವೆ.

ಹಲವಾರು ಸುಳಾದಿ - ಉಗಾಭೋಗಗಳನ್ನು ರಚಿಸಿದರು. ಗೋಪಿಯಂತೆ ಒರಳಿಗೆ ಕಟ್ಟಿದೆ ಬರಿದೆ ಎಂದೆ ದೈನ್ಯ ಪಡುವೆ ಮುಂತಾದ ರೀತಿಯಲ್ಲಿ ಸುಳಾದಿಗಳು ಕಂಡು ಬಂದರೆ, 'ಬೆಲ್ಲದ ಕಟ್ಟೆಗೆ....' ಎಂಬ ಉಗಾಭೋಗದ ಸಾದೃಶ್ಯ ಹಿತಮಿತವಾಗಿದೆ.

ನರಹರಿತೀರ್ಥರು ಮತ್ತು ಶ್ರೀಪಾದ ರಾಜರಿಂದ ಉಗಮಿಸಿದ ದಾಸ ಪರಂಪರೆ ವ್ಯಾಸರಾಯರ ಆಧ್ಯಾತ್ಮಿಕತೆಯಲ್ಲಿ ಪ್ರಜ್ವಲಿಸಿತು. ಪುರಂದರ ದಾಸರನ್ನು ವ್ಯಾಸಸ್ತುತಿಯು ಕೊಂಡಾಡುತ್ತದೆ. ಬೇಲೂರು ಕೇಶವದಾಸರು ತಮ್ಮ 'ಹರಿಭಕ್ತ ವಿಜಯ' ಎಂಬ ಕೃತಿಯಲ್ಲಿ ಪುರಂದರದಾಸರ ಕೀರ್ತನೆ ಪದ್ಧತಿಯ ಉದ್ಧಾರ, ಸಂಗೀತಶಾಸ್ತ್ರದ ಉದ್ಧಾರ, ಕರ್ನಾಟಕ ಭಾವೋಜ್ಜೀವನ, ಮುಂತಾದ ರೀತಿಯಲ್ಲಿ ಮಾಡಿದರು ಎಂದು ಹೇಳುತ್ತಾರೆ. ತ್ಯಾಗರಾಜರಿಗೂ ಕೊಟ್ಟ ಸ್ಫೂರ್ತಿ ಗಮನೀಯ.

ಪುರಂದರದಾಸರ ಸಮಕಾಲೀನರಾದ ಕನಕದಾಸರು ದಾಸಸಾಹಿತ್ಯದಲ್ಲಿ ಕಾಣಿಸಿದ ಸಾಹಿತ್ಯಕಾಂಶದ ಕೊರತೆಯನ್ನು ತುಂಬಿಕೊಟ್ಟರು. ವ್ಯಾಸರಾಯರ ಅಚ್ಚುಮೆಚ್ಚಿನ ಶಿಷ್ಯ ಮಾಧ್ವ ಭಕ್ತರಾದ ಕನಕದಾಸರು ಕೀರ್ತನೆಗಳೊಂದಿಗೆ ಮೋಹನ ತರಂಗಿಣಿ (ಸಾಂಗತ್ಯಕೃತಿ) ರಾಮಧಾನ್ಯ ಚರಿತೆ (ರಾಗಿ ಭತ್ತದ ನಡುವೆ ವಾದ), ನಳಚರಿತ್ರೆ (ನಳದಮಯಂತಿ ಕಥೆ) ಹರಿಭಕ್ತಿಸಾರಗಳಲ್ಲದೇ 'ಮುಂಡಿಗೆ' ಎಂಬ ಹೊಸ ಸಾಹಿತ್ಯ ಪ್ರಕಾರವನ್ನು ತಂದರು. 'ಕಾಗಿನೆಲೆ ಆದಿಕೇಶವ' ಅಂಕಿತ ನಾಮ ಬಳಸಿ ಹಲವು ಕೀರ್ತನೆಗಳನ್ನು ಹಾಡಿಕೊಂಡಾಡಿದರು.

ಕನಕದಾಸರ ಸಾಹಿತ್ಯ ಶೈಲಿಯಲ್ಲಿ ನಾಣ್ಣುಡಿ, ಒಳನುಡಿ, ಅನ್ಯದೇಶ್ಯಗಳ ವರ್ಣನೆ, ಪೌರಾಣಿಕ ಕಥೆಗಳಿಂದ ತತ್ಕಾಲೀನ ಜೀವನಕ್ಕೆ ಭಕ್ತಿ ಸಂದೇಶಿಸುವಿಕೆ, ರಾಜಕೀಯ ಧ್ವನಿ, ತತ್ವನೀತಿ, ರೂಪಕ, ಉಪಮೆ ಮುಂತಾದ ಅಂಶಗಳಿಗೆ ಕವಿತ್ವದ ಪರಿವೇಷ ಕಂಡು ಬರುತ್ತದೆ. ಮುಂಡಿಗೆಯು ಬೆಡಗಿನ ವಚನಗಳಂತೆ ಸಂಕೇತ ಬಲ್ಲವರಿಗೆ ಮಾತ್ರ ಗಮ್ಯವಾಗಿವೆ. ಪುರಂದರ ದಾಸರಂತೆ ಇವರಲ್ಲಿಯೂ ಜನಪದ ಧಾಟಿ ಕಂಡು ಬರುತ್ತದೆ. 'ಸಾರಿದೂರಿ ಹೇಳತೀನ ಏನೂ ಇಲ್ಲದ ಎರಡು ದಿನದ ಸಂಸಾರ' ಮುಂತಾದವು ಇವರ ಕೀರ್ತನೆಗಳಲ್ಲಿ ಸಮಾಜದ ವಿಮರ್ಶೆಯಾಗಿ ಜನಜೀವನ ಚಿತ್ರಗಳನ್ನು ಕಳಕಳಿಯಾಗಿ, ನೈಜವಾಗಿ, ಹರಿತ ಮಾತುಗಳಿಂದ ತೀವ್ರ ವಿಡಂಬನೆ ಕಂಡು ಬರುತ್ತದೆ. 'ತನು ನಿನ್ನದು ಜೀವನ ನಿನ್ನದು', ತಲ್ಲಣಿಸದಿರು ಕಂಡು ತಾಳು ಮನವೆ, ಎಲ್ಲಿ ನೋಡಿದಲ್ಲಿ, ರಾಮಕೃಷ್ಣಗೋಪಿಯರನ್ನು ಕುರಿತ ಹಲವು ಕೀರ್ತನೆಗಳಲ್ಲಿ ಮತ್ತು ಕಾವ್ಯ ಗ್ರಂಥಗಳಲ್ಲಿ ನವೋನವ ಪ್ರತಿಭೆಯ ಸಹಜ ಲಾಸ್ಯ ನಾಟ್ಯವಾಡಿದಂತಿದೆ.

ನರಹರಿತೀರ್ಥರ ಕೀರ್ತನೆ, ಶ್ರೀಪಾದ ರಾಜರ ಸುಳಾದಿಯಂತಹ ಕಾವ್ಯ ಪ್ರಕಾರಗಳನ್ನು ಪಡೆದು, ವ್ಯಾಸರಾಜರ ಸಂಗೀತವನ್ನು ಅಳವಡಿಸಿಕೊಂಡ ದಾಸಸಾಹಿತ್ಯ. ವಾದಿರಾಜರ ಶಾಸ್ತ್ರಗಳೊಂದಿಗೆ, ಪುರಂದರದಾಸರ - ಕನಕದಾಸರಿಂದ ಜಾನಪದದ ಸೊಗಡನ್ನು ಮೈಗೂಡಿಸಿಕೊಂಡಿತು.

ಕೂಟ ರೂಪದಲ್ಲಿ ಸಂಘಟಿತವಾದ ಹರಿದಾಸ ಪಂಥ ಮತ್ತು ಅವರ ಸಾಹಿತ್ಯ ವಿಜಯನಗರ ಸಾಮ್ರಾಜ್ಯದ ಪತನಾನಂತರ ಚದುರಿಹೋಯಿತು. ಸು. ಒಂದು ಶತಮಾನದ ಕಾಲದಲ್ಲಿ ಮಹಪತಿದಾಸರು ಕೃಷ್ಣರಾಯರಂಥಹ ಕೆಲವು ಹರಿದಾಸರು ಮಾತ್ರ ಕಂಡು ಬರುತ್ತಾರೆ. 17-18ನೇ ಶತಮಾನದ ನಡುವಿನ ಅವಧಿಯಲ್ಲಿ ಪುರಂದರದಾಸರ ನಾಲ್ಕು ಮಕ್ಕಳು ದಾಸಕೂಟ ಪರಂಪರೆಯನ್ನು ಮುಂದುವರಿಸಿದರೆಂಬ ಪ್ರತೀತಿ ಇದೆ. ವಿಜಯೀಂದ್ರತೀರ್ಥ ಮತ್ತು ಅವರ ಪ್ರಶಿಷ್ಯರು ಅದನ್ನು ಮುಂದು ವರಿಸಿದರೂ, ಗುಪ್ತಗಾಮಿಯಾಗಿ ಹರಿಯುತ್ತಿದ್ದ ದಾಸ ಪರಂಪರೆಯನ್ನು ಮಹಾ ಹೆದ್ದೊರೆಯಾಗಿ ಬೆಳಗಿದವರು ಸುಧೀಂದ್ರತೀರ್ಥರ ಪುತ್ರರಾದ ರಾಘವೇಂದ್ರ ತೀರ್ಥರು. ಪುರಂದರದಾಸರ ಗುಂಪಿಗೂ ಹಾಗೂ ವಿಜಯದಾಸರ ಗುಂಪಿಗೂ ಮಧ್ಯ ವರ್ತಿಗಳಾಗಿ ದಾಸಕೂಟದ ಮುಂದಿನ ಹರಿದಾಸರಿಗೆಲ್ಲಾ, ಭಕ್ತಿ ವೃಂದಕ್ಕೆಲ್ಲಾ ಸ್ಫೂರ್ತಿಯಾದರು. ಇಂದು ಎನಗೆ ಗೋವಿಂದ ಎಂಬ ಕೀರ್ತನೆ ಒಂದೇಯಾದರೂ ಇವರ ಮೇಲೆ ಹರಿದಾಸರುಗಳಿಂದ ರಚಿತವಾದಷ್ಟು ಸ್ತೋತ್ರ ಪದಗಳು ಬೇರೆ ಯಾರ ಮೇಲೂ ರಚಿತವಾಗಿಲ್ಲ - ಎನ್ನುವಷ್ಟರ ಮಟ್ಟಿಗೆ ಪ್ರಭಾವ, ಪ್ರೇರಣೆ ಇವರದು.

ಪುನಶ್ಚೇತನಗೊಂಡ ಹರಿದಾಸ ಪರಂಪರೆಯ ಪ್ರಭಾವವನ್ನು ಪುನರುಜ್ಜೀವನಗೊಳಿಸಿದವರಲ್ಲಿ ಅಗ್ರಗಣ್ಯರೆಂದರೆ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಪ್ರಸನ್ನ ವೆಂಕಟದಾಸರು. ಪ್ರಸನ್ನ ವೆಂಕಟದಾಸರು ಕೀರ್ತನೆಗಳಲ್ಲದೇ ಭಾಗವತ ದಶಮಸ್ಕಂದದ ಪೂರ್ವಾರ್ಧವನ್ನು ಕನ್ನಡದಲ್ಲಿ ರಚಿಸಿದ್ದಾರೆ. ಮಹಿಪತಿದಾಸರು ಅನುಭಾವ ತತ್ವದ ಹಾಡುಗಳನ್ನು ರಚಿಸಿದ್ದಾರೆ.

ದಾಸಶ್ರೇಷ್ಠರೆಂದು ಕೀರ್ತಿಗಳಿಸಿದ ವಿಜಯದಾಸರು ವಾದಿರಾಜರ ಶಾಸ್ತ್ರೀಯ ಪ್ರಭಾವದಿಂದ ಶ್ರೀಪಾದರಾಯರ ಸುಳಾದಿಯ ಪ್ರಕಾರದಲ್ಲಿ ಮತ್ತಷ್ಟು ಶಾಸ್ತ್ರೀಯವಾಯಿತು. ಪ್ರಮೇಯ, ಪ್ರಳಯ, ಸೃಷ್ಟಿ ಮುಂತಾದ ಸೂಕ್ಷ್ಮ ವಿಷಯಗಳನ್ನು ಕುರಿತು ಹೇರಳವಾಗಿ



ಸುಳಾದಿಗಳನ್ನು ರಚಿಸಿದರು. ಹಿಂದಿನ ಹರಿದಾಸರ ಸಾಹಿತ್ಯವನ್ನು ಉಳಿಸಿಕೊಂಡು ದಾಸಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದರು. ಅನೇಕ ಶಿಷ್ಯರಿಗೆ ದಾಸದೀಕ್ಷೆ ಕೊಟ್ಟು ಹರಿದಾಸ ಪರಂಪರೆಯನ್ನು ಮುಂದುವರಿಯುವಂತೆ ಮಾಡಿದರು. ಇವರ ಶಿಷ್ಯರಲ್ಲಿ ಪ್ರಮುಖರಾದವರು ಗೋಪಾಲದಾಸರು.

ಇವರ ಪ್ರಮುಖ ಉನ್ನತ ಕೊಡುಗೆಯೆಂದರೆ ಸ್ತ್ರೀಯರಿಗೆ ಅಂಕಿತ ನೀಡಿ, ಹರಿದಾಸ ದೀಕ್ಷೆ ಕೊಡಲು ಪ್ರಾರಂಭಿಸಿದರು. ಇದರಿಂದ ಹೆಳವನಕಟ್ಟೆ ಗಿರಿಯಮ್ಮ ನಂತಹ ಅನೇಕ ಸ್ತ್ರೀಯರು ಹರಿದಾಸ ಸಾಹಿತ್ಯ ಸಮೃದ್ಧಿಯಲ್ಲಿ ಪಾಲ್ಗೊಳ್ಳುವಂತಾಯಿತು. ಗೋಪಾಲದಾಸರು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ.

## ಸ್ವಾಮಿ ದರ್ಶನಕ್ಕೆ
### ಉಚಿತ ಅವಕಾಶ

ತಿರುಪತಿಯ ಬಸ್ ನಿಲ್ದಾಣ, ರೈಲು ನಿಲ್ದಾಣಗಳಿಂದ ಅಲಿಪಿರಿಗೆ ಉಚಿತ ಬಸ್ ಇದೆ. ಅಲಿಪಿರಿಯಲ್ಲಿ ನಿಮ್ಮ ವಸ್ತುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು. ಬೆಟ್ಟದಲ್ಲಿ ಉಚಿತ ಸರಳ ಕೋಣೆಗಳು ದೊರೆಯುತ್ತವೆ. ಯಾತ್ರಿಕ ಸಮುದಾಯ ಸೌಲಭ್ಯ ಕೇಂದ್ರಗಳಲ್ಲಿ ಉಚಿತವಾಗಿ ಸಾಮಾನುಗಳನ್ನು ಭದ್ರಪಡಿಸಿಕೊಂಡು ಸಾಮೂಹಿಕವಾಗಿ ವಿಶ್ರಾಂತಿ ಪಡೆಯಬಹುದು. ಇಲ್ಲಿ ಸ್ನಾನ ಶೌಚಗೃಹಗಳು ಉಂಟು. ಮುಡಿಯನ್ನು ಉಚಿತವಾಗಿ ನೀಡಲು ಅವಕಾಶವಿದೆ. ದರ್ಶನಕ್ಕೆ ಹೊರಡುವಾಗ ಪಾದರಕ್ಷೆಗಳನ್ನು ಉಚಿತವಾಗಿ ಭದ್ರಪಡಿಸಬಹುದು. ಧರ್ಮದರ್ಶನದಲ್ಲಿ ಸ್ವಾಮಿಯನ್ನು ಕಂಡುಬರುವಾಗ ಉಚಿತ ಭೋಜನದ ಚೀಟಿಯನ್ನು ಪಡೆದು ಕ್ಯಾಂಟಿನ್‌ನಲ್ಲಿ ಭೋಜನ ಸೌಲಭ್ಯ ಪಡೆಯಬಹುದು.

ಮಹಿಳೆಯರಿಗೆ ದೀಕ್ಷೆ ಕೊಡುವುದು, ಒಂದು ಪ್ರಭಾವವೆನಿಸಿದರೆ ಮಠಾಧಿಪತಿಗಳಾಗಿದ್ದ ವ್ಯಾಸತಜ್ಞರು ದೀಕ್ಷೆಯನ್ನು ಕೈಗೊಳ್ಳುವಂತೆ ಮಾಡಿದ್ದು ಪರೋಕ್ಷ ಪ್ರಭಾವವೆನಿಸುತ್ತದೆ.

ದಾಸಕೂಟ ಪರಂಪರೆಯನ್ನು ಉಜ್ವಲವಾಗಿ ಬೆಳಗಿದ ಮತ್ತೊಬ್ಬ ದಾಸರೆಂದರೆ ಗೋಪಾಲದಾಸರ ಶಿಷ್ಯ ಜಗನ್ನಾಥದಾಸರು, ತಂತ್ರಸಾರ (27 ನುಡಿಗಳಲ್ಲಿ ವಿಷ್ಣುಸ್ತುತಿ ಮಂತ್ರಸ್ವರೂಪ), ಹರಿಕಥಾಮೃತಸಾರ (32 ಸಂಧಿ ಒಳಗೊಂಡಿದ್ದು, ಸು. 1000 ದಷ್ಟು, ಭಾಮಿನೀ ಪಟ್ಪದಿಯಲ್ಲಿ ರಚಿತಗೊಂಡ ಪದ್ಯಗಳ ಗ್ರಂಥ) ಮಧ್ವಮತ ತತ್ವಸುವ್ವಾಲಿ (ತ್ರಿಪದಿ ಧಾಟಿಯಲ್ಲಿ ತತ್ವವನ್ನು ಹೇಳುವ 600 ಪದ್ಯಗಳಿವೆ) ದೇವರ ಭಕ್ತಿ ಪ್ರಿಯತೆ ಸಾರುವ 'ಮನವಚನ ಕಲಿದೂರ (2-4) ಜನನಿಯನ್ನು ಕಾಣದಿಹ ಬಾಲಕ (2-11), ಆವ ದೇಹವ ಕೊಡಲಿ ಹರಿ ಮತ್ತಾವ ಲೋಕದೊಳಿಡಲಿ ತಾ ಮತ್ತಾವ ದೇಶದೊಳಿರಲಿ ಆವಾವಸ್ಥೆಗಳು ಬರಲಿ - (7-22) ಅನೇಕ ನಿದರ್ಶನಗಳಿವೆ.

ಜಗನ್ನಾಥದಾಸರ ಕೀರ್ತನೆಯಗಳಲ್ಲಿ ಹರಿಗುರು ಸ್ತುತಿ, ಅಧ್ಯಾತ್ಮಿಕ ಅನುಭಾವ ಮುಖ್ಯ. 'ಎಂಥಾದೋ ಶ್ರೀ ವೈಕುಂಠವೆಂಥಾದೋ', ರಂಗ ನಿನ್ನ ಕೊಂಡಾಡುವ ಮಂಗಳಾತ್ಮರು, ಸಿರಿರಮಣ ತವಚರಣ, ಕಂಡ ಕಂಡೆ, ಅರಿತ ವರಿಗತಿ ಸುಲಭ ಹರಿಯ ಪೂಜೆ - ಮುಂತಾದ ಕೀರ್ತನೆಗಳಲ್ಲಿ ಜಗನ್ನಾಥದಾಸರ ಮಹಾಮುಕಿತ್ವದ ಮತ್ತು ಸಮರ್ಪಣೆ ಸಿದ್ಧಿಯ ಪ್ರತೀಕ ಭವ್ಯರೂಪಕವಾಗಿದೆ.

ಹೀಗೆ ಈ ಘಟ್ಟದಲ್ಲಿ ಹರಿದಾಸರಿಂದ ನಿರ್ಮಾಣಗೊಂಡ ಶಿಷ್ಯ - ಪರಂಪರೆ ಹರಿದಾಸ ಪರಂಪರೆಯ ಮುಂದುವರಿಕೆಗೆ ಕಾರಣವಾಯಿತು.

ದಾಸಸಾಹಿತ್ಯ ಪರಂಪರೆಯ ಮೂರನೇ ಘಟ್ಟವನ್ನು ಪ್ರಾಣೇಶದಾಸರಿಂದ ಗುರುತಿಸಬಹುದು. ಇದರ ಕೊನೆ ಇಲ್ಲವೆನ್ನುವಷ್ಟರ ಮಟ್ಟಿಗೆ ಈ ಹರಿದಾಸ ಪರಂಪರೆ ಇದೆ. ಜಗನ್ನಾಥದಾಸರ ಶಿಷ್ಯರಾದ ಪ್ರಾಣೇಶದಾಸರು ಅನೇಕ ಕೀರ್ತನೆ ಸುಳಾದಿಗಳೊಂದಿಗೆ ಕಥನಕಾವ್ಯಗಳನ್ನು ಬರೆದರು. ಅಂದರೆ ಎರಡನೇ ಘಟ್ಟದ ಹರಿದಾಸರ ಶಿಷ್ಯ - ಪ್ರಶಿಷ್ಯರ ಕೂಟವೇ ಇಲ್ಲಿ ಬರುತ್ತದೆ. ಇವರಲ್ಲದೇ ಶ್ರೀದವಿಠಲ, ವೆಂಕಟವಿಠಲ, ಶ್ರೀಶವಿಠಲ, ಜಗನ್ನಾಥದಾಸರ ಪರಂಪರೆಯಲ್ಲಿ ಬಂದರೆ, ವಿಜಯದಾಸರ ಶಿಷ್ಯ ಪರಂಪರೆಯಲ್ಲಿ ಗುರು ತಂದೆ ಗೋಪಾಲವಿಠಲ ಪೆತ್ತ ತಂದೆ ಗುರುಗೋಪಾಲವಿಠಲ, ಗುರುಜಗನ್ನಾಥವಿಠಲ ಪರಂಪರೆಯನ್ನು ಗುರುತಿಸಬಹುದು.

ಒಂದು ತತ್ವ ಬೋಧನೆಯನ್ನು ಪದೇ ಪದೇ ಪ್ರತಿಪಾದಿಸಿದರೆ ಆ ಹಿನ್ನೆಲೆಯಲ್ಲಿ ಬಿಗಿಯಾದ ಬಂಧ ತಗ್ಗುವುದು ಸಹಜ. ಹಾಗೆಯೇ ಎರಡನೇ ಘಟ್ಟದ ಬಿಗಿಯಾದ ರಚನಾಬಂಧವನ್ನು ಮೂರನೇ ಘಟ್ಟದಲ್ಲಿ ತಗ್ಗುತ್ತ ಬಂದಿರುವುದನ್ನು ಗಮನಿಸುವಂಥದ್ದು.

ಪ್ರಮುಖವಾಗಿ ಈ ಘಟ್ಟದಲ್ಲಿ ಹರಿ ಭಕ್ತೆಯರು ನಿರ್ಮಿಸಿದ ಮಹಿಳೆಯರ ದಾಸಸಾಹಿತ್ಯ ಪರಂಪರೆ ವಿಶಿಷ್ಟವಾದದ್ದು. ಕಾರಣ ಸುಂದರಬಾಯಿ, ಗಣಪಕ್ಕ, ಚೆಲ್ಲಮ್ಮ, ಹರಪನಹಳ್ಳಿ ಭೀಮವ್ವ, ಲಕ್ಷ್ಮೀದೇವಮ್ಮ, ಶಾಂತಾಬಾಯಿ, ಪನ್ನಿ ಲಕ್ಷ್ಮೀಬಾಯಿ ಮುಂತಾದವರು ರಚನೆಯಲ್ಲಿ ತೊಡಗಿ, ಕ್ಷೇತ್ರವನ್ನು ವಿಸ್ತಾರಗೊಳಿಸಲು ಅನ್ವಯವಾಯಿತು. ಒಟ್ಟಾರೆಯಾಗಿ ಹರಿದಾಸ ಸಾಹಿತ್ಯ ಪರಂಪರೆಯ ಪ್ರಭಾವ ಘಟ್ಟದಿಂದ ಘಟ್ಟಕ್ಕೆ ದಾಸರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಡಾ.ಆರ್. ಸುನಂದಮ್ಮನವರ ಸಂಶೋಧನೆಯಂತೆ ಸು. ಆರುನೂರು ಮಂದಿ ದಾಸರು ಕಂಡು ಬರುತ್ತಾರೆಂಬುದು ಗಮನೀಯವಾಗಿದೆ.

ಮಠದ ಸ್ವಾಮಿಗಳೆನಿಸಿದ ಹರಿದಾಸರಿಂದ ಪ್ರಾರಂಭಗೊಂಡ ಹರಿದಾಸ ಸಾಹಿತ್ಯ, ದಾಸಕೂಟವಾಗಿ ಬೀದಿಗಿಳಿಯಿತು. ಮುಂದಿನ ಘಟ್ಟದಲ್ಲಿ ಹರಿದಾಸರಿಂದ ಶಾಸ್ತ್ರ ಪ್ರಮೇಯ ಯುಕ್ತವಾದರೂ ಮೂರನೇ ಘಟ್ಟದಲ್ಲಿ ಅವರ ಶಿಷ್ಯ - ಪ್ರಶಿಷ್ಯರ ಪರಂಪರೆಯಲ್ಲಿ ಮತ್ತೆ ಸರಳವಾಗಿ, ಸರಾಗವಾಗಿ ಮುಂದುವರೆಯಿತು. ಕನ್ನಡಿಗರ ಚಿರಸ್ಥಾಯಿಯಾದ ಸ್ವತ್ತಾಯಿತು.

★★★★★

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ತಿಣಿಯ ರಘುವರ ಚರಿತೆಯಲಿ
ಕಾಲಿಡಲು ತೆರಪಿಲ್ಲ

ಈ ಕಾರಣವಾಗಿಯೇ ನಾನು ಭಾರತದ ಕತೆಯನ್ನೇ ಆಯ್ದುಕೊಂಡೆ. ಕೃಷ್ಣಭಕ್ತಿಯನ್ನು ತಲ್ಲೀನನಾಗಿ ವರ್ಣಿಸುತ್ತ, ಆಖ್ಯಾಯಿಸುತ್ತ ಭಗವಾನ್ ಶ್ರೀಕೃಷ್ಣನನ್ನು ನಮ್ಮ ಕಣ್ಣುಮುಂದೆ ನಿಲ್ಲಿಸಿದ್ದಾನೆ ಕುಮಾರವ್ಯಾಸ.

ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯ ನೊರೆವೆನು
ಕೃಷ್ಣ ಮೆಚ್ಚಲಿಕೆ

ಭಾಗವತ ಧರ್ಮದ ಹೆಗ್ಗಳಿಕೆಯನ್ನು ಮನದುಂಬಿ ಹಾಡಿದ್ದಾನೆ ಈ ಕುಮಾರವ್ಯಾಸ ತನ್ನ ''ಕರ್ನಾಟ ಭಾರತ ಕಥಾಮಂಜರಿ''ಯಲ್ಲಿ. ಗದುಗಿನ ಭಾರತವೆಂದೂ ಖ್ಯಾತಿಯಾಗಿದೆ. ಗಮಕಿಗಳಂತೂ ಶತಶತಮಾನಗಳಿಂದಲೂ ಈ ಕಾವ್ಯವನ್ನು ಮನೆ ಮನೆಗೂ ತಲುಪಿಸಿ ಧನ್ಯಗೊಂಡಿದ್ದಾರೆ. ಕಲಿಯದವರಿಗೂ ಕೂಡ ಸುಲಲಿತವಾಗಿ ಸುಭಗವಾಗಿ ತಿಳಿಯುತ್ತದೆ. ಭಕ್ತಿಯ ಪ್ರಭಾವ ದೈವಾನುಗ್ರಹದಿಂದ ಈ ಶರಧಿಯೊಳು ಅಡಗಿಹವನೇಕ ಪುರಾಣಗಳು ಎಂದಿದ್ದಾನೆ. ಪೀಠಿಕಾ ಸಂಧಿಯಲ್ಲಿ ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ ಎಂದೇ ಹೇಳಿಕೊಂಡಿದ್ದಾನೆ.

ಆದರೆ ಅದ್ವಿತೀಯನಾದ ಈತ ರೂಪಕಗಳನ್ನು ಅಷ್ಟೇ ಸಲೀಸಾಗಿ ಬಳಸಿದ್ದಾನೆ. ಅಪಕೀರ್ತಿ ನಾರಿಯ ಸೆರಗ ಹಿಡಿದರು. ಐರಾವತಕೆ ಕಬ್ಬಿನಲಿರಿದಡಂಜಿಕೆಯುಂಟೆ. ಜೀವ ಭ್ರಮೆಯ ಕವಚವಕಳೆದು ಹೊಳೆ ಹೊಳೆ ವಾತ್ಮನಂದದೊಳು. ಎಳಲತೆಯ ಕುಡಿ ಮಾಳಿಗೆಗೆ ತೊಲೆಯೆ - ರೂಪಕ ಸಾಮ್ರಾಜ್ಯದ ಚಕ್ರವರ್ತಿಯೀತ.

ಜಗತ್ತಿನಲ್ಲಿ ಇರುವುದೆಲ್ಲವೂ ಇದರಲ್ಲಿದೆ, ಇದರಲ್ಲಿಲ್ಲದ್ದು ಜಗತ್ತಿನಲ್ಲಿಲ್ಲ ಅಸಾಮಾನ್ಯ ಕೃತಿಯಿದು.

# ಕುಮಾರವ್ಯಾಸನು ಹಾಡಿದನೆಂದರೆ.....

- ಹಣಮಂತ ತಾಸಗಾಂವಕರ.

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಕುಮಾರ ವ್ಯಾಸ ಗದುಗಿನ ಸಮೀಪದ ಕೋಳಿಂಗನಪುರ - ಕೋಳಿವಾಡದವ. ಗೌಡಕಿ ಮನೆತನ. ಒಂದನೆಯ ದೇವರಾಯನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಲಕ್ಕರಸಯ್ಯ - ಲಕ್ಷ್ಮಣದೇವನ ಮಗ ವೀರನಾರಾಯಣಗೌಡ. ಗದುಗಿನ ವೀರ ನಾರಾಯಣ ದೇವಸ್ಥಾನದಲ್ಲಿ ಒದ್ದೆ ಪಂಚೆಯುಟ್ಟು ಅದು ಆರುವಷ್ಟು ಸಮಯದಲ್ಲಿ ಮಾತ್ರ ಕೃತಿ ರಚಿಸುತ್ತಿದ್ದವ ವೀರನಾರಾಯಣನೇ ಕವಿ ತಾನು ಕೇವಲ ಲಿಪಿಕಾರ ಎಂದು ವಿನಯಭಕ್ತಿಯಿಂದ ಅರುಹಿದ್ದಾನೆ. ತನ್ನೀ ಕಾವ್ಯ

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವ ವಿಚಾರ ಮಂತ್ರಿ
ಜನಕ್ಕೆ ಬುದ್ಧಿಗುಣ,
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರ
ವ್ಯಾಸ ಭಾರತವ

ಕವಿಯ ಊರು ಕೋಳಿವಾಡದಲ್ಲಿ ಮಾಧವ ಜನಾರ್ದನ ದೇವಾಲಯವಿದ್ದು, ಗದುಗಿನ ವೀರನಾರಾಯಣನನ್ನೇ ಹೋಲುತ್ತಿದೆ. ಕುಮಾರವ್ಯಾಸನ ತಂದೆ ಲಕ್ಕರಸಯ್ಯ ಇದನ್ನು ನಿರ್ಮಿಸಿರುವನು. ಕವಿ ತನ್ನ ಕುರಿತಾಗಿ, ವೈಯಕ್ತಿಕ ವಿವರಗಳನ್ನು ತನ್ನೀ ಕಾವ್ಯದಲ್ಲಿ ಎಲ್ಲೂ ಹೇಳಿಲ್ಲ. ಆದರೆ ಹತ್ತು ಪರ್ವಗಳ ವಿಶಾಲವಾದ ಈ ಕನ್ನಡ ಭಾರತ ಕೃತಿ ದೊರೆತದ್ದೊಂದು ಪುಣ್ಯ.

ಸಮಗ್ರ ಭಾರತವನ್ನು ಅಂದರೆ ಆದಿಯಿಂದ ಗದಾಪರ್ವದ ವರೆಗೆ ಕಥೆ ರಚಿಸಿದ್ದಾನೆ. ಇಲ್ಲಿ ಆದಿಪರ್ವ ಸಭಾಪರ್ವ ಅರಣ್ಯಪರ್ವ ವಿರಾಟಪರ್ವ, ಉದ್ಯೋಗಪರ್ವ, ಭೀಷ್ಮಪರ್ವ ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ ಗದಾಪರ್ವಗಳಲ್ಲಿ ವಿಂಗಡಣೆಗೊಂಡಿದೆ. ಆರಾಧ್ಯ ದೈವ ಗದುಗಿನ ವೀರನಾರಾಯಣ. ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿಯಾದ ಕುಮಾರವ್ಯಾಸ ನಡುಗನ್ನಡದಲ್ಲಿ ಭಾಮಿನೀ ಷಟ್ಪದಿಯಲ್ಲಿ ಭಗವದ್ ವಿರಾಟ ದರ್ಶನ ಮೂಡಿಸಿದ್ದಾನೆ. ಮಾನುಷಶಕ್ತಿ ದೈವಶಕ್ತಿಯನ್ನು ಭಕ್ತಿಯಿಂದ ಗೆಲ್ಲಲು ಸಾಧ್ಯವೆಂಬುದನ್ನು ತೋರಿದ್ದಾನೆ. ಭಕ್ತಿಯ ವಿವಿಧಾವಸ್ಥೆಗಳನ್ನು ಚಿತ್ರಿಸಿದ್ದಾನೆ. ಮಹಾಭಾರತದಲ್ಲಿಯ ಮಾನವ ಜೀವನದ ಜಟಿಲತೆಗಳನ್ನು ಕಲಾಮಯ ವಾಗಿಸಿದ್ದಾನೆ. ತನ್ನ ಈ ಕಾವ್ಯ ಕುರಿತಾಗಿ -

ಪದದ ಪ್ರೌಢಿಯ ನವರಸಂಗಳ
ವುದಿತ ವೆನುವಭಿಧಾನ ಭಾವವ
ಬೆದಕಲಾಗದು ಬಲ್ಲಪ್ರೌಢರುಮೀ
ಕಥಾಂತರಕೆ।
ಇದ ವಿಚಾರಿಸೆ ಬರಿಯ ತೊಳಸಿಯ
ವುದಕ ದಂತಿರೆಯಿಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ಧರ್ಮ
ವಿಚಾರ ಮಾತ್ರವನು ॥

ಈತನ ಕೆಲ ಪದಪುಂಜಗಳು ರೂಪಕಗಳಾಗಿ ಕಂಡು ಬರುತ್ತವೆ - ''ಸೀಳ ಬಹುದೇ ಸೀಸದುಳಿಯಲಿ ಶೈಲವನು'', ''ಬತ್ತಿದ ಕೆರೆಯೊಳಗೆ ಬಲೆಯೇಕೆ ?'', ''ಕರಿ ವಿನೋದದಿ ಕುಡಿದ ಜಲವನು ಕರಿಣಿಯಲಿ ತೆಗೆ ತೆಗೆದು ರಿಪು ಮೋಹರಕೆ ಚೆಲ್ಲಿತು ಕಲ್ಪುಮೇಘದ ಬಸಿರ ಬಗೆದಂತೆ''- ಹೀಗೆ ಅರ್ಥ ಪೂರ್ಣ, ಧ್ವನಿಪೂರ್ಣ ಪದ ಪುಂಜಗಳಿಗೇನೂ ಕೊರತೆಯಿಲ್ಲ.

ಮೇಲ್ನೋಟಕ್ಕೆ ಇದೊಂದು ಧರ್ಮದ ಗ್ರಂಥವೆನಿಸಿದರೂ ಈ ದೇಶದ ಸಂಸ್ಕೃತಿ ನಾಗರಿಕತೆಗಳೆಲ್ಲ ಸಮಗ್ರವಾಗಿ ಪ್ರತಿ





ಬಿಂಬಿತವಾಗಿವೆ. ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಎತ್ತಿ ಹಿಡಿದಿದ್ದಾನೆ. ಕಥಾಭಾಗದಲ್ಲಿ ಕವಿ ಮೆರೆದಿರುವ ಸ್ವಾತಂತ್ರ್ಯಕ್ಕಿಂತಲೂ ಅದರ ನಿರೂಪಣಾ ರೀತಿಯಲ್ಲಿ ವಹಿಸಿರುವ ಸ್ವಾತಂತ್ರ್ಯ ಆತನ ಕಾವ್ಯಕ್ಕೆ ಚಿರನೂತನತೆಯನ್ನು ತಂದುಕೊಟ್ಟಿದೆ. ಮಹಾಕವಿ ಪಟ್ಟವನ್ನೂ ತಂದುಕೊಟ್ಟಿದೆ. ಇವನ ಭಾರತದಲ್ಲಿ ಬರದೇ ಇರುವ ಪಾತ್ರಗಳೇ ಇಲ್ಲ. ದೇವತೆಗಳು, ಗಂಧರ್ವರು, ದಾನವರು, ಮಾನವರು, ಚಕ್ರವರ್ತಿಯಿಂದ ಸೇವಕನವರೆಗೆ ಎಲ್ಲ ಸ್ಥಾನದ ಗುಣಸ್ವಭಾವದ ಗಂಡಸು ಹೆಂಗಸರು ಮಕ್ಕಳೂ ಎಲ್ಲರೂ ಚಿತ್ರಿತರಾಗಿದ್ದಾರೆ. ಭೀಷ್ಮರಂತಹ ಮಹೋನ್ನತರೂ, ದ್ರೋಣರಂತಹ ಬಿಲ್ಲುವಿದ್ಯಾಚತುರರೂ, ಕರ್ಣನಂತಹ ತ್ಯಾಗಜೀವಿ ದುರ್ದೈವಿಗಳೂ, ಶಲ್ಯ ಭೀಮರಂತಹ ಗಂಡುಗಲಿಗಳೂ, ಅರ್ಜುನ ಅಭಿಮನ್ಯು, ಅಶ್ವತ್ಥಾಮರಂತಹ ವೀರ ಪುರುಷರೂ, ಧರ್ಮರಾಯನಂತಹ ನಿರ್ಮಲ ಚಿತ್ತರೂ ವಿದುರನಂತಹ ಸುಜ್ಞಾನಿಗಳಾದ ಭಗವದ್ಭಕ್ತರೂ, ದುರ್ಯೋಧನನಂತಹ ಛಲದಂಕ ಮಲ್ಲರೂ, ಅಭಿಮಾನ ಧನರೂ ಕೀಚಕನಂತಹ ನೀಚರೂ, ಶಕುನಿಯಂತಹ ಕುತಂತ್ರಿಗಳೂ, ಧೃತರಾಷ್ಟ್ರನಂತಹ ಕಣ್ಣಿನ ಕುರುಡರೂ, ಉತ್ತರಕುಮಾರನಂತಹ ಘಾತಿನ ಮಲ್ಲರೂ ಇದ್ದಾರೆ.

ಕುಂತಿ, ದ್ರೌಪದಿ, ಗಾಂಧಾರಿಯರಂತಹ ಚಾರಿತ್ರ್ಯ ಶೀಲ ಕ್ಷತ್ರಿಯ ಮಹಿಳಾ ಮಣಿಗಳೂ ಇಲ್ಲಿ ಕಂಡುಬರುತ್ತಾರೆ. ಇವೆಲ್ಲ ಮಾನವ ಪಾತ್ರಗಳಿಗೆ, ಸಂಘಟನೆಗಳಿಗೆ ಸೂತ್ರಧಾರ ಮಾತ್ರ ಶ್ರೀಕೃಷ್ಣ. ಇವನ ಸುತ್ತಲೂ ಭಾರತದ ಪಾತ್ರಗಳು. ಇವನೇ ಪ್ರಧಾನಶಕ್ತಿಯೂ ಪ್ರೇರಕಶಕ್ತಿಯೂ ವಿಶಿಷ್ಟನೂ ಆಗಿದ್ದಾನೆ.

ಆದಿಪರ್ವದಲ್ಲಿ ಪಾಂಡುವಿನ ಮರಣ ಪ್ರಸಂಗ ಹೃದಯಸ್ಪರ್ಶಿಯಾಗಿದ್ದರೆ, ದ್ಯೂತ ಪರ್ವದಲ್ಲಿ ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ ಹೃದಯ ವಿದ್ರಾವಕವಾದದ್ದು. ಎಂತಹ ಕಲ್ಲೆದೆಯವರೂ ಆರ್ತರಾಗುತ್ತಾರೆ. ಕವಿ ಅಸತ್ಯ

ಅನ್ಯಾಯಗಳನ್ನು ಕಂಡು ಕೆರಳಿದ್ದಾನೆ. ಪಾತ್ರಗಳನ್ನು ಜೀವಂತವಾಗಿ ಸ್ವತಂತ್ರವಾಗಿ ಬೆಳೆಯಗೊಟ್ಟಿದ್ದಾನೆ. ತಾನು ಪುಷ್ಪವತಿಯೆಂದು ದ್ರೌಪದಿ ಮೊರೆಯಿಟ್ಟರೆ ದುಃಶಾಸನನು ಅಟ್ಟಹಾಸದಿಂದ ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರು ರಾಜ ಭವನದಲ್ಲಿ - ಎಂಬುದು ಅನಪಸನೀಯುವೆನಿಸಿದರೂ ಸನ್ನಿವೇಶಕ್ಕೆ ತಕ್ಕಂತಿದೆ - ಭೀಮ ಅರ್ಜುನರಿಬ್ಬರೂ ದ್ರೌಪದಿಯ ಈ ದುಃಸ್ಥಿತಿಯನ್ನು ಕಂಡು ''ಮನದೊಳಗೆ ಕೌರವನ ಕರುಳನು ತನಿ ರಕುತದಲಿ ಕುದಿಸಿದರು'' ಎಂದು ಸುಪ್ತಜ್ವಾಲಾಮುಖಿಯನ್ನು ಚಿತ್ರಿಸಿದ್ದಾನೆ.

ತರುಣಿ ದುಶ್ಶಾಸನನ ನೊರೆನೆ
ತ್ತರಲಿ ನಾದುವೆ ನಿನ್ನ ಮಂಡೆಯ
ಕುರುಳ ಬಾಚುವೆನಿವನ ದಂತದ
ಹಣಿಗೆಯಲಿ ಖಳನ

- ಎಂದು ಭೀಮ ಪ್ರತಿಜ್ಞೆ ಕೈಗೊಳ್ಳುವನು. ಹಿರಿಯರೆಲ್ಲರಿಗೂ ಒಕ್ಕೊರಲಿನಿಂದ ಬೇಡಿ ಕೊಂಡರೂ ಪ್ರಯೋಜನವಾಗದೆ ಇದ್ದಾಗ ಕೊನೆಗೆ ಉಳಿದವನು ದೇವರೊಬ್ಬನೆ. 'ನೀನೆ ಗತಿ ಕೃಷ್ಣಾಯೆಂದು ಹಲುಬಿದಳು ದುಃಖಾತಿ ರೇಕದಲಿ' ದುರ್ಯೋಧನ ದುಶ್ಶಾಸನರು ಅಟ್ಟಹಾಸದಿಂದ ಕೂಡಿದ್ದರು.

ಸೋತ ಬಳಿಕವರೆಮ್ಮ ವನವ
ಖ್ಯಾತಿಯಲಿ ನಾವ್ ನಡೆವರಲ್ಲಪ್ಪ
ಘಾತಿರೇಕದಿ ನೀವು ಧರ್ಮಿಷ್ಟ
ಲಂಜುವೆನೆ ನಿಮಗೆ।
ಈ ತಳೋದರಿ ತೊತ್ತಿಲಿ ಸಂ
ಘಾತವಾಗಲಿ ಸಾಕು ನಿಮ್ಮಯ
ಮಾತೆನುತ ಕುರುರಾಯ ಜರೆದನು ಭೀಷ್ಮ
ಗುರು ಕೃಪರ ॥

ದ್ರೌಪದಿಯ ಪರಿಸ್ಥಿತಿಯೇ ಬೇರೆ. ಆರ್ತತೆಯಿಂದ ಪೂರ್ಣೇಂದು ಮುಖಿ ಹಲುಬಿದಳು ಬಲು ತೆರದಿಂದಲಚ್ಯುತನ.

ಕೂಗಿ ಕರೆದೊಡೆ ಓ ಎನ್ನನೇ. ಇವಳ ಕೂಗಿಗೆ ಓಗೊಟ್ಟ ಕೃಷ್ಣ - ''ಸೀರೆಯನು ಸುಲಿಯಲ್ಕೆ ಕಾಯ್ಯೆ ಕೃಷ್ಣಾಯೆಂದೆನುತ ನಾರಿಯೊರಲುತ್ತಿಹಳು ಪುಟ್ಟಾ ಸೀರೆ ಸೆಳೆಯಲು ಬಳಿಕ ಲಕ್ಷಯ ಸೀರೆಯಾಗಲಿಯೆಂದ ಗದುಗಿನ ವೀರ ನಾರಾಯಣ.''

ಅರಣ್ಯಪರ್ವದಲ್ಲಿ ಘೋಷಯಾತ್ರೆ ವಿರಾಟಪರ್ವದಲ್ಲಿ ಕೀಚಕ ಪ್ರಸಂಗ ಹಾಗೂ ಉತ್ತರ ಗೋಗ್ರಹಣ, ಉದ್ಯೋಗ ಪರ್ವದಲ್ಲಿ ಕೃಷ್ಣ ಸಂಧಾನ, ಅದರಂತೆಯೇ ಕರ್ಣಭೇದ ಸಾಧನೆ ಮಹತ್ವದ್ದಾಗಿವೆ.

ಖಳರು ತಮ್ಮುನ್ನತಿಯ ಕೀಲನು
ಕಳಚಿ ಕಳೆದರು ಮರಳಿ ಮಾಡುವ
ಡಳುಕಿದರು ತನ್ನವರು ಪತಿಗಳೆ
ಪರಮ ವೈರಿಗಳು।
ಹಳಿವ ನೀನೇ ಬಲ್ಲೆಯಿನ್ನೆ
ನ್ನಳಿವ ನೀನೇ ಬಲ್ಲೆ ಹಿರಿದಾ
ಗಳಲಿದೆನು ಸಲಹೆಂದು ಕಂಬನಿ
ತುಂಬಿದಳು ತರಳೆ ॥

ಸಂಧಿಕಾರ್ಯಕೆ ಹೊರಟ ಕೃಷ್ಣನಿಗೆ ಮೊರೆಯಿಟ್ಟಳು. ದ್ರೌಪದಿಯ ಅಳಲನ್ನು ಕನಿಕರದಿಂದ ಕಂಡ ಕೃಷ್ಣ-

ಏಳು ತಾಯೆ ಸರೋಜ ಮುಖಿ ವಿಪಿ
ನಾಲಯದೊಳತಿ ನವೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು
ನಿನ್ನ ಹರಿಬದಲಿ।
ಕಾಳಗವನೇ ಬಲಿದು ತಹೆನಿವ
ರೇಳಿಲವ ಮಾಡಿದರೆ ರಿಪುಗಳ
ಸೀಳಿ ಕರುಳನು ಮುಡಿಸದಿರೆನೇ
ನಿನ್ನ ಕಬರಿಯಲಿ ॥

ಭಕ್ತವತ್ಸಲನಲ್ಲವೇ ಶ್ರೀಹರಿ. 'ದುಃಖಿಸಬೇಡ ನಿನ್ನ ಇಷ್ಟದಂತೆಯೇ ಕೈಗೊಳ್ಳುವೆ'ನೆಂದು ಅಭಯವಿತ್ತ. ಶ್ರೀಕೃಷ್ಣನಿಂದಲೇ ಭಾರತಕ್ಕೆ ಆದಿ, ಮಧ್ಯ, ಅಂತ್ಯ. ಎಲ್ಲೆಲ್ಲೂ ಕೃಷ್ಣನ ಕೃಪಾಶೀರ್ವಾದವೇ. ಅವನಿಲ್ಲದ ಭಾರತವಿಲ್ಲ. ಅಧರ್ಮವನ್ನು ಜಯಿಸಿ, ಧರ್ಮವನ್ನು ನೆಲೆ ಗೊಳಿಸಲು ಧರ್ಮರಾಯನಂತಹ ಸಾತ್ವಿಕ ವ್ಯಕ್ತಿಯಿಂದ ಸಾಧ್ಯವಿಲ್ಲ. ಕೃಷ್ಣನಂತಹ ಸಮರ್ಥ ಸತ್ಯನಿಷ್ಠ ಮುತ್ಸದ್ಧಿಯ ರಾಜಧರ್ಮದಿಂದ ಮಾತ್ರ ಸಾಧ್ಯ ಎಂದೇ ಸಾರಿದ್ದಾನೆ. ಧೀರ, ದಾನಿ, ಕರ್ಣನ ದುರಂತವಂತೂ ಹೃದಯವೇದ್ಯ. ಸೂರ್ಯನ ಮಗನಾಗಿ, ಕುಂತೀಪುತ್ರನಾಗಿ ಪಾಂಡವನಾಗಿ ಧರ್ಮಜನ ಅಗ್ರಜನಾಗಿ ಕ್ಷತ್ರಿಯನಾಗಿ, ವೀರನಾಗಿ ಇದ್ದವ. ಕೊನೆಯಲ್ಲಿ ಮಾತ್ರ ಕೌರವನ ಶ್ರೇಯಸ್ಸೇ ಕರ್ಣನದಾಯಿತು. ಉದ್ಯೋಗ ಪರ್ವದ ರಾಯಭಾರ ವಿಫಲವಾದ ನಂತರ ಯುದ್ಧವನ್ನೇ ಬಳುವಳಿಯಾಗಿ ಪಡೆದು ಹೊರಟ ಕೃಷ್ಣ ತನ್ನೊಡನೆ ಸ್ವಲ್ಪ ದೂರ ಬರಲು ಕರ್ಣನನ್ನು ಕೇಳಿದ -

ಭೇದವಿಲ್ಲಲ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವೊಡನ್ವಯದ ಮೊದ
ಲೆರಡಿಲ್ಲ ನಿನ್ನಾಣೆ
ಮೇದಿನೀ ಪತಿ ನೀನು ಚಿತ್ತದೊ
ಳಾದುದರಿವಿಲ್ಲೆನುತ ದಾನವ
ಸೂದನನು ರವಿಸುತನ ಕಿವಿಯಲಿ
ಬಿತ್ತಿದನು ಭಯವ

- ಎಂದು ಮಾತನಾಡುತ್ತ ಅವನ ಹುಟ್ಟಿನ ರಹಸ್ಯವನ್ನು ಸ್ಫೋಟಗೊಳಿಸುತ್ತಾನೆ.

ಲಲನೆ ಪಡೆ ದೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರ ದೇವ ಮೂರನೆ
ಯಾತ ಕಲಿಭೀಮ
ಫಲುಗುಣನು ನಾಲ್ಕನೆಯ ಲೈದನೆ
ಯಲಿ ನಕುಲ ಸಹದೇವರಾದರು
ಬಳಿಕ ಮಾದ್ರಿಯಲೊಂದು ಮಂತ್ರ
ದೊಳಿಬ್ಬರುದಿಸಿದರು

ಜನ್ಮ ರಹಸ್ಯವನ್ನು ಹೇಳಿ 'ನೀನು ಸೂತ ಸುತನೇನಲ್ಲ ಸೂರ್ಯ ಸುತ. ನೀನೇ ರಾಜನಾಗಲು ತಕ್ಕವ. ನನ್ನೊಡನೆ ಬಾ - ಧಾರುಣೀಪತಿಯಾಗು' - ಎಂದು ಕರೆಯುತ್ತಾನೆ. ಅವನೊಡ್ಡುವ ಭವಿಷ್ಯದ ಚಿತ್ರ ಬಹುಸುಂದರ-

ಎಡದ ಮೈಯಲಿ ಕೌರವೇಂದ್ರರ
ಗಡಣ ಬಲದಲಿ ಪಾಂಡು ತನಯರ
ಗಡಣ ವಿದಿರಲಿ ಮಾದ್ರ ಮಾಗಧ
ಯಾದವಾದಿಗಳು।



ನಡುವೆ ನೀನೋಲಗದೊಳೊಪ್ಪುವ
ಕಡು ವಿಲಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದ ವೆಂಬುದು
ಕಷ್ಟನಿನಗೆಂದ ॥

ಕೃಷ್ಣನ ಈ ಮಾತುಗಳನ್ನು ಕೇಳಿದ ಕರ್ಣನು ತಳಮಳಗೊಳ್ಳುವನು. ಘಾತವಾಯಿತೋ ಮಿತ್ರ ಕೃಷ್ಣನ ಈ ಕಾರಸ್ಥಾನದಿಂದ. ನನ್ನ ಹುಟ್ಟಿನ ಗುಟ್ಟನ್ನು ತಿಳಿಸಿ ನನ್ನನ್ನು ನಿರಾಯುಧನನ್ನಾಗಿಸಿದ. ಈಗ ಕರ್ಣನ ಕೊರಳ ಸೆರೆ ಹಿಗ್ಗಿದವು. [illegible] ಕಡು ನೊಂದನ್, "[illegible] ಪತಿಗೆ ಕೇಡಾದುದು ತನ್ನ [illegible] ಕೊಂದನು ಹಲವು ಮಾತೇನು" - ಎಂದು ಮಮ್ಮಲ ಮರುಗಿದನು. ಅದರಂತೆಯೇ ಕುಂತಿ ಕರ್ಣರ ಸಂವಾದವೂ ಇದೇ ಸಾಲಿನಲ್ಲಿ - ರಸ್ತೆಯಲ್ಲಿ ನಡೆಯುತ್ತದೆ. "ಆದಡೈವರು ಮಕ್ಕಳನು ತಲೆಗಾಯ್ದು ತೋರ್ಕೈ ತಂದೆ, ನಿನಗಿನ್ನೀ ದುರಾಗ್ರಹ ವೊಪ್ಪುವುದೇ ಕೌರವನ ಸೇವೆಯಲಿ" ಎನ್ನುತ್ತ "ಹೋದ ಬಾಣವ ಮರಳಿ ತೊಡದಿರು ಮಾದು ಕಳೆ ವೈರವನೆಂದು" ತಾಯಿ ಬಿನ್ನವಿಸಿದಾಗ ಮಗ ಕರ್ಣ 'ಸಲ್ಗೆ, ಹಸಾದ'ವೆಂದು ಭರವಸೆಯಿತ್ತು ಬೀಳ್ಕೊಟ್ಟ.

ದುರ್ಯೋಧನನಿಗೆ ಕರ್ಣನಲ್ಲಿದ್ದಷ್ಟು ಪ್ರೀತಿ ನಂಬಿಕೆಗಳು ಬೇರೆ ಇನ್ನು ಯಾರ ಮೇಲೂ ಇಲ್ಲ. ಆದರ. ಪೂರ್ತಿ ಚಿತ್ರ ಕರ್ಣಪರ್ವದಲ್ಲಿ ಬರುವಂತಾಗಿ ವಿಲಯಭೈರವನು ಸಿಡಿಲ ಮಿಂಚುಗಳ ಹಿಡಿದು ತಾಂಡವಗೈಯ್ಯುತ್ತ ಕೋಲಾಟವಾಡುವ ಚಿತ್ರ ಕಣ್ಣಮುಂದೆ ನಿಂತಂತೆ ಆಗುತ್ತದೆ.

ರಣರಂಗದಲ್ಲಿ ಧರ್ಮರಾಜ ಕರ್ಣನನ್ನು ಹೀಗೆ ಕಂಡನು - ಧರ್ಮಜ ಅರ್ಜುನನಿಗೆ ಹೇಳುವ ಮಾತಿದು-

ಜಾಳ ಜರೆದು ಜಡಾತ್ಮರಿಗೆ ಜಂ
ಘಾಳ ತನವನು ಮೆರೆದು ಮೋಡಿಯ
ಖೂಳರನು ಮೊಪ್ಪರಿಸಿ ಚೂಣಿಯ
ಚರರ ಚಪ್ಪರಿಸಿ।
ಆಳುತನದಲಿ ಬೆರೆವ ನಿನಗವ
ಸೋಲಲರಿಯನು ನಿನ್ನ ಗಂಟಲ
ಗಾಳ ನಿನಗಳುಕುವನೆ ಕರ್ಣನು
ಪಾರ್ಥ ಹೇಳೆಂದ ॥

ರಥ ಭೂಮಿಯಲ್ಲಿ ಸಿಕ್ಕಿದ್ದು, ಕುದುರೆಗಳ ಸಾಹಸ, ಕರ್ಣನ ಪ್ರಯತ್ನದ ಭಂಗ, ಇಲ್ಲೆಲ್ಲ ಕುಮಾರವ್ಯಾಸನ ಚಾಕಚಕ್ಯತೆಯು ಅರಿವಾಗುತ್ತದೆ. ಭೂಮಿಯಲ್ಲಿ ಚಕ್ರ ಸೂತು ಹೋದಾಗ ಅವನನ್ನು ಹೊಡೆಯಲು ಅರ್ಜುನನಿಗೆ [illegible]. ಕಣ್ಣರಿಯದಿದ್ದರೂ ಕರುಳರಿತ ಸಂದರ್ಭ. ಸೋದರ ಪ್ರೀತಿಯುಕ್ಕಿ [illegible] ಬಾಣಗಳು ಕೆಳಬೀಳುತ್ತವೆ. ಅರ್ಜುನ ತನ್ನ ಮನದ ಒಳತೋಟಿಯನ್ನು ಕೃಷ್ಣನ ಮುಂದೆ ತೆರೆದಿಡುತ್ತಾನೆ. ಇಲ್ಲಿ ಕುಮಾರವ್ಯಾಸನ ಮಾನವೀಯ ಅನುಕಂಪ, ಕರ್ಣಪಕ್ಷವನ್ನು ಹಿಡಿದು ಹಾರುತ್ತದೆ. ಓದುಗನಿಗೆ ಕುಮಾರವ್ಯಾಸನ ಪ್ರತಿಭೆಯನ್ನು ಮೆಚ್ಚುವುದು ಅನಿವಾರ್ಯ ವಾಗುತ್ತದೆ. "ಸರಳ ತೊಡು ಬೇಗದಲಿ, ಕರ್ಣನ ಶಿರವನಿಳುಹೈ, ಹಾರದಿರು, ಹೇವರಿಸದಿರು, ತೆಗೆ ದಿವ್ಯ ಶರವನು" - ಕೃಷ್ಣ ಅರ್ಜುನನನ್ನು ಪುಸಲಾಯಿಸುತ್ತಾನೆ. ಅರ್ಜುನ ಅವನ ಮಾತಿನಂತೆ ಕೈದುಗಳಿಲ್ಲದ ಕರ್ಣನನ್ನು ಹೊಡೆಯುತ್ತಾನೆ. ಅರ್ಜುನನ ರಥದಲ್ಲಿನ ಆಂಜನೇಯನಿಗೆ ಕರ್ಣನ ಶೌರ್ಯದ ಬಗ್ಗೆ ಮೆಚ್ಚುಗೆಯುಂಟಾಗುತ್ತದೆ. ಅರರೆ ಭಾಪುರೆ ಕರ್ಣ ಮಝು ಭಾಪುರೇ ಭಟಾಗ್ರಣಿ! ನಿನ್ನ ಸರಿದೊರೆಯೆರಡು ಯುಗದಲ್ಲಿ ಕಾಣೆ ನೆಂದಳಲಿದನು ಕಲಿಹನುಮ.

ನಾರಣಪ್ಪನ ಭೀಮ ಅತಿವಿಶಿಷ್ಟ ವ್ಯಕ್ತಿ - ಭೀಷ್ಮ, ದ್ರೋಣರು ವಯಸ್ಸಿನಿಂದ ಜ್ಞಾನದಿಂದ ವೃದ್ಧರು. ವೀರ ಬಾಲಕ ಅಭಿಮನ್ಯು ಅಭೇದ್ಯ ಪದ್ಮವ್ಯೂಹವನ್ನು ಭೇದಿಸಿಕೊಂಡು ಒಳಹೊಕ್ಕು ಭಯಂಕರವಾದ ಬಾಣಗಳನ್ನು ಬಿಡುತ್ತ ಯುದ್ಧ ಮಾಡುತ್ತ ಕತ್ತಿಯನ್ನೂ ಕೈಗಳನ್ನೂ ಕಳೆದುಕೊಂಡ. ರಥ ಚಕ್ರವನ್ನೇ ತಿರುಗಿಸುತ್ತ ದುಶ್ಯಾಸನ ಕುಮಾರನನ್ನು ಕೊಂದು, ತಾನೂ ವೀರ ಮರಣವನ್ನು ಅಪ್ಪುತ್ತಾನೆ. ಕಾಡು ಕಿಚ್ಚಿದ್ದಡವಿಯನು ಕುಡಿನಾಲಗೆಯೊಳಡವಳಿಸಿ ದಳ್ಳುರಿ ಜ್ವಾಲೆ ತಗ್ಗಿದ ವೋಲು. ಗಗನದ ಮುಗಿಲ ವೋಹರವ ಧಾಳಿಯಲಿ ಕಟ್ಟಿ ಸುಂಟರಗಾಳಿಯುರವಣೆ ನಿಂದವೋಲು, ಸುರಪಾಲ ತನಯನ ತನಯನಸ್ತಮಿಸಿದನು ರಣದೊಳಗೆ -

ಯುದ್ಧವರ್ಣನೆಯಲ್ಲಿ ವೈವಿಧ್ಯವಿದೆ ಒಂದು ಯುದ್ಧ ವರ್ಣನೆ [illegible] ಇನ್ನೊಂದು ಇಲ್ಲ. ವೀರರ [illegible], ಕುಟುಕುವಿಕೆ, ಅವಹೇಳನ [illegible] ಬಗೆಯಾಗಿವೆ. "[illegible]" ತೊಡೆಯ [illegible] ತುರುಕ ನೃಪತಿಯು ತೊಡೆಗ ಲಾಗಿಸಿದ.

ಕುಮಾರವ್ಯಾಸನು ವೀರಾಧಿವೀರರನ್ನು ಚಿತ್ರಿಸಿರುವಂತೆ ಉತ್ತರಕುಮಾರನಂತಹ ಹಾಸ್ಯದ ಹುಲುವೀರನನ್ನೂ ಸೃಷ್ಟಿಸಿದ್ದಾನೆ. ಉತ್ತರನು ತನ್ನ ಪೌರುಷವನ್ನು ಹೆಂಗಳೆಯರ ಮುಂದೆ ಬಿಚ್ಚಿಡುತ್ತಾನೆ. ರಣವೇ ಎಂದು ಹಾಸ್ಯ ಮಾಡುತ್ತಾನೆ. ಇಂದಿಗೂ ಇವನಂತಹವರನ್ನು ಹೆಸರಿಸಿ ಕರೆಯುವಷ್ಟು ಪ್ರಚಲಿತವಿದೆ.

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮಕುಲದಲಿ
ಜನಿಸಿಬಂದವರು
ವೀರರೆಂಬುವರಿವರು ಮೇಲಿ
ನ್ನಾರ ಹೆಸರುಂಟವರೊಳಗೆಂದು

- ತನ್ನ ಹಿರಿಮೆಯನ್ನು ಹೊಗಳಿಕೊಳ್ಳುವ ಈತನ ಮಾತಿನಿಂದ ಎಂತಹ ಗಂಭೀರರೂ ಮುಗುಳ್ನಗುವರು.

ಶೃಂಗಾರ ಪರಿಮಳ ಸನ್ನಿವೇಶಗಳಲ್ಲಿಯೂ ವಿರಹಿಗಳ ಶೃಂಗಾರ[illegible] ಹೆಚ್ಚಾಗಿದೆ. ಪದ ಪ್ರಯೋಗ ಚಾತುರ್ಯ, ಪದಮಾಧುರ್ಯ, ಸೌಕುಮಾರ್ಯ ಮೊದಲಾದ ಕಾವ್ಯ ಗುಣಗಳು ರಮಣೀಯವಾಗಿದೆ.

ಕೌರವ ವಧೆಯಾದನಂತರ ಧರ್ಮರಾಜನ ಪಟ್ಟಾಭಿಷೇಕ ದೊಡನೆ ಕಾವ್ಯ ಮಂಗಳ ಗೊಳ್ಳುತ್ತದೆ. ★

# ತಿರುಮಲೆ - ತಿರುಪತಿ - ತಿರುಚಾನೂರು

ಆಂಗ್ಲಮೂಲ : ಎಂ. ರಾಮರಾವ್.
ಅನುವಾದ : ಎಸ್.ವಿ. ಹೇಮಾವತಿ.

## ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯ

ಶ್ರೀ ಗೋವಿಂದರಾಜಸ್ವಾಮಿ ಆಲಯ ನಿರ್ಮಾಣವಾದಂತೆ ಹನ್ನೆರಡನೇಯ ಶತಮಾನದ ಮಧ್ಯಭಾಗದಲ್ಲಿ ತಿರುಪತಿ - ಪಟ್ಟಣವೂ ನಿರ್ಮಾಣವಾಯಿತು. ಅದಕ್ಕೂ ಮೊದಲು ಕಪಿಲತೀರ್ಥದ ಬಳಿ ಈಗಿರುವ ಊರಿನಿಂದ ಎರಡು ಕಿ.ಮೀ. ದೂರದಲ್ಲಿ ಕೊತ್ತೂರು ಎಂಬ ಹೆಸರಿನ ಒಂದು ಕುಗ್ರಾಮವಿದ್ದಿತಷ್ಟೆ. ಇಂದು ಗೋವಿಂದರಾಜಸ್ವಾಮಿ ಆಲಯವಿರುವ ಕಡೆ ಒಂದು ಸಣ್ಣ ಕೃಷ್ಣಸ್ವಾಮಿ ಆಲಯ ಮಾತ್ರ ಇದ್ದಿತು. ವಿಖ್ಯಾತ ವೈಷ್ಣವ ಆಚಾರ್ಯರಾದ ರಾಮಾನುಜಾಚಾರ್ಯರು ಗೋವಿಂದರಾಜ ಸ್ವಾಮಿ ಆಲಯವನ್ನು ನಿರ್ಮಿಸಿ ಅದರ ಸುತ್ತ ನಾಲ್ಕು ರಥಬೀದಿಯ ಕಿರಿಯ ಬಡಾವಣೆ ಯೆಂಬಂತೆ ರಾಮಾನುಜಪುರವನ್ನು ಕಟ್ಟಿದರು. ಈ ಕಿರಿಯ ಹಾಡಿಯನ್ನು ವಿಸ್ತರಿಸಿ ವಿಜಯನಗರದ ಅರಸರ ಕಾಲದಲ್ಲಿ ಗೋವಿಂದರಾಜಪುರವೆಂಬ ಪಟ್ಟಣವಾಗಿ ಬೆಳೆಸಲಾಯಿತು. ಕೊತ್ತೂರು ಇದ್ದಂತಹ ಸ್ಥಳದಲ್ಲಿ ಒಂದು ಅಚ್ಯುತರಾಯ ಪುರ ಉಂಟಾಯಿತು. ಗೋವಿಂದರಾಜಸ್ವಾಮಿ ಆಲಯದ ಪಶ್ಚಿಮದಲ್ಲಿ ಒಂದು ಶ್ರೀನಿವಾಸಪುರ ಉಂಟಾಯಿತು. ಪೇಟೆ ಬೀದಿಯೂ, ದೊಡ್ಡ ಪೇಟೆಯೂ ಆಗಿ ನಗರ ಬೆಳೆಯಿತು. ಹಲವು ಹೊಸಗುಡಿಗಳು ಉಂಟಾದವು. ರಾಮ ಚಂದ್ರನಿಗಾಗಿ ರಘುನಾಥ ಆಲಯ, ಪೆರಿ ಯಾಳ್ವಾರ್ ಆಲಯ, ಅಚ್ಯುತರಾಯ ಆಲಯ, ನಮ್ಮಾಳ್ವಾರ್ ಆಲಯ, ಕಪಿಲೇಶ್ವರ ಆಲಯ ಹಾಗೂ ನರಸಿಂಹಸ್ವಾಮಿ ದೇವಾಲಯಗಳು ಅನ್ನುಗಳಲ್ಲಿ ಮುಖ್ಯ.

**ಶ್ರೀ ಗೋವಿಂದರಾಜಸ್ವಾಮಿ ಆಲಯ:** ತಿರುಪತಿಗೆ ಬರುವ ಯಾತ್ರಿಕರ ಮುಖ್ಯ ಆಕರ್ಷಣೆ ಎಂದರೆ ಇಲ್ಲಿನ ಶ್ರೀ ಗೋವಿಂದರಾಜಸ್ವಾಮಿ ಆಲಯ. ಇದುವೇ ನಗರದಲ್ಲಿ ಅತಿ ದೊಡ್ಡ ಆಲಯವೂ ಆಗಿದೆ.

ಆಲಯದಲ್ಲಿ ಅಸಂಖ್ಯವಾದ ಶಾಸನ ಗಳುಂಟಾದರೂ, ಅವುಗಳಲ್ಲಿ ಯಾವ ಒಂದು ಶಾಸನವೂ ಆಲಯವನ್ನು ನಿರ್ಮಿಸಿದ ಕಾಲವನ್ನಾಗಲೀ, ನಿರ್ಮಿಸಿದ ವ್ಯಕ್ತಿಗಳನ್ನಾಗಲೀ ಹೆಸರಿಸುವುದಿಲ್ಲ. ಅತಿ ಪ್ರಾಚೀನ ದಾಖಲೆಯೆಂದರೆ ಕ್ರಿ.ಶ. 1235 ರ ಕಾಲದ್ದು. ಗುರುಪರಂಪರೆಯ ಪುಸ್ತಕಗಳು ಆಲಯ ನಿರ್ಮಿತಿಯಲ್ಲಿ ರಾಮಾನುಜಾಚಾರ್ಯರ



ಹೆಸರನ್ನೇ ಹೇಳುತ್ತವೆ. ಈ ಆಚಾರ್ಯ ಪುರುಷರು ಚೋಳರ ರಾಜ್ಯದ ಹೃದಯ ಭಾಗದಲ್ಲಿದ್ದ ಶ್ರೀರಂಗದಲ್ಲಿ ನೆಲೆಸಿ ಶ್ರೀ ವೈಷ್ಣವ ಧರ್ಮವನ್ನು ಪ್ರಚಾರ ಮಾಡುತ್ತಿದ್ದರು. ಮೊದಲನೆಯ ಕುಲೋತ್ತುಂಗ ಚೋಳನ ಆಳ್ವಿಕೆಯ ಕಾಲವು (1070 ರಿಂದ 1120) ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮದ ಬೆಳವಣಿಗೆಯಲ್ಲಿ ಒಂದು ಪ್ರಭಾವಶಾಲಿ ಕಾಲವಾಯಿತು. ಈತ ಶೈವ ಧರ್ಮದ ಭಕ್ತನಾಗಿದ್ದ. ಈ ಹೊತ್ತಿಗೆ ರಾಮಾನುಜಾಚಾರ್ಯರ ನೇತೃತ್ವದಲ್ಲಿ ವೈಷ್ಣವ ಧರ್ಮ ಅತಿ ಚಟುವಟಿಕೆಯಿಂದ ಕೆಲಸ ಮಾಡುತ್ತಿದ್ದಿತು. ಇದರಿಂದಾಗಿ ಶೈವ ವೈಷ್ಣವ ತಿಕ್ಕಾಟವುಂಟಾಗುವಂತಾಯಿತು. ಒಮ್ಮೆ ಸ್ಪರ್ಧಿ ಪಂಥಗಳಲ್ಲಿ ವಾಗ್ವಾದ ಉಂಟಾಗಿ ಒಬ್ಬ ಶೈವರು ಶಿವನಿಗಿಂತ ಹೆಚ್ಚಿನದು ಇಲ್ಲವೆನ್ನಲು (ಶಿವ ಎಂಬುದು ಒಂದು ಅಳತೆಯೂ ಹೌದಾಗಿ) ವೈಷ್ಣವರೊಬ್ಬರು ದ್ರೋಣ ಎಂಬ ಅಳತೆ ಮತ್ತೂ ಹೆಚ್ಚಿನದು ಎಂದು ಉತ್ತರಿಸಿದ್ದು, ಸ್ವಾಭಾವಿಕವಾಗಿಯೇ ರಾಜನಿಗೆ ಸಿಟ್ಟು ಬಂದಿದ್ದಿತು. ಅನಂತರ ಆತ ಚಿದಂಬರದ ನಟರಾಜನ ಆಲಯಕ್ಕೆ ಹೋಗಿದ್ದಾಗ ಗೋವಿಂದರಾಜಸ್ವಾಮಿಯ ಹೆಸರಿನಲ್ಲಿ ಅಲ್ಲಿ ಒಂದು ಚಿಕ್ಕದಾದ ವಿಷ್ಣುಮಂದಿರವೂ ಇದೆಯೆಂದು ತಿಳಿದು ಬಂದಾಗ ವೈಷ್ಣವರ ವ್ಯಂಗ್ಯವನ್ನು ತಿರುಗಿಸಿ ನೀಡುವಂತೆ ಗೋವಿಂದರಾಜನಿಗೆ ಭೂಮಿಯಲ್ಲೇನು ಕೆಲಸ ಆತ ಮಲಗಬೇಕಾದ್ದು ಸಮುದ್ರದಲ್ಲಿ ಎಂದು ಹೇಳುವನಾದನು. ವೈಷ್ಣವರಿಗೆ ತಮ್ಮ ದೇವ ಪ್ರತಿಮೆಯ ರಕ್ಷಣೆಯ ಬಗ್ಗೆ ಕಾಳಜಿ ಯುಂಟಾಯಿತು. ಅವರು ತಮ್ಮ ಆಲಯದ ಗರ್ಭಗುಡಿಯ ಬಾಗಿಲಿಗೆ ಗೋಡೆಯನ್ನೆಬ್ಬಿಸಿ ಗೋವಿಂದರಾಜಸ್ವಾಮಿಯ ಉತ್ಸವ ವಿಗ್ರಹದೊಡನೆ ರಾತ್ರಿಯೇ ಚಿದಂಬರವನ್ನು ತೊರೆದು ಬಂದರು. ಸುತ್ತು ಬಳಸಿ ಪ್ರಯಾಣ ಮಾಡುತ್ತ ತಿರುಪತಿ ಪ್ರದೇಶದ ಬಳಿಯಿದ್ದ ಕೊತ್ತೂರು ಗ್ರಾಮಕ್ಕೆ ಬಂದು ಉತ್ಸವ ವಿಗ್ರಹವನ್ನು ಅಲ್ಲಿ ಬಚ್ಚಿಟ್ಟರು. ರಾಮಾನುಜರಿಗೂ ಚೋಳರಾಜನ ವಿರೋಧವನ್ನು ಎದುರಿಸಲಾಗದೆ ಹೋಗಿ ಅವರು ಆಧುನಿಕ ಮೈಸೂರು ರಾಜ್ಯವಾಗಿದ್ದ ಹೊಯ್ಸಳರಾಜ್ಯವನ್ನು ಪ್ರವೇಶಿಸಿದರು. ಕ್ರಿ.ಶ. 1120 ರಲ್ಲಿ ಕುಲೋತ್ತುಂಗ ಚೋಳನ ಮರಣಾನಂತರ ಅವರು ಶ್ರೀರಂಗಕ್ಕೆ ಆಗಮಿಸಿದರು. ಅವರು ತಿರುಮಲೆಗೆ ಬಂದಾಗ



ಚಿದಂಬರದಿಂದ ತಂದ ಗೋವಿಂದರಾಜಸ್ವಾಮಿ ವಿಗ್ರಹವನ್ನು ಬೆಟ್ಟದ ಕೆಳಗಿನ ಗ್ರಾಮದಲ್ಲಿ ಇಡಲಾಗಿದೆಯೆಂದು ತಿಳಿದುಕೊಂಡ ಅವರು, ಕೃಷ್ಣಸ್ವಾಮಿ ದೇವಾಲಯದ ಬದಿಯಲ್ಲಿ ಗೋವಿಂದ ರಾಜಸ್ವಾಮಿಯ ಮೂಲವಿಗ್ರಹ ವನ್ನು, ಚಿದಂಬರದಿಂದ ತಂದಂತಹ ಲೋಹದ ವಿಗ್ರಹವನ್ನೂ ಪ್ರತಿಷ್ಠಾಪನೆ ಮಾಡಿದರು. ಈ ಕಾರ್ಯ ನಡೆದದ್ದು ಕ್ರಿ.ಶ. 1130 ರ ಆಸುಪಾಸಿನಲ್ಲಿ.

**ಆಲಯದ ಚರಿತ್ರೆ :** ಈ ಆಲಯದಲ್ಲಿ ಹಾಗೂ ತಿರುಮಲೆಯ ಆಲಯದಲ್ಲಿ ದೊರೆತಿರುವ ಹೆಚ್ಚು ಸಂಖ್ಯೆಯ ಶಾಸನಗಳಿಂದಾಗಿ ಈ ಆಲಯದ ಚರಿತ್ರೆಯನ್ನು ಗುರುತಿಸಲು ನೆರವು ಸಿಗುತ್ತದೆ. ಮುಖಮಂಟಪದ ಹೊರಭಾಗದಲ್ಲಿರುವ ಒಂದು ಶಾಸನವು ಕ್ರಿ.ಶ. 1235 ಕ್ಕೆ ಸೇರಿದ್ದು ಮೂರನೇ ರಾಜರಾಜ ಚೋಳನ ಆಡಳಿತದ 19 ನೇ ವರ್ಷಕ್ಕೆ ಸಂಬಂಧಪಟ್ಟಿರುವುದು. ಇದೇ ಅತಿ ಪ್ರಾಚೀನವಾದ ಉಪಲಬ್ಧ ಶಾಸನ. ಇದರಿಂದಾಗಿ ಆ ಹೊತ್ತಿಗೇ ಮುಖಮಂಟಪವೂ, ಕಂಬಗಳ ಅಂಗಳದ ಸುತ್ತ ಅಂತರಾಳ, ಗರ್ಭಗೃಹಗಳೂ ಇದ್ದವೆಂಬುದು ತಿಳಿದುಬರುತ್ತದೆ. (I-40) ನಂತರದ ಶಾಸನವು (I-61) ಕ್ರಿ.ಶ. 1264 ರ ದಾಗಿದ್ದು ವೈಕಾಸಿ ಉತ್ಸವದಲ್ಲಿ ದೇವರಿಗೆ ಏರ್ಪಡಿಸಿದ ನಿವೇದನೆಯನ್ನು ಸೂಚಿಸುತ್ತದೆ. ಕ್ರಿ.ಶ. 1239 ಕ್ಕೆ ಸೇರಿದ ವೀರನರಸಿಂಗ ಯಾದವರಾಯನ ಆಡಳಿತದ ಮೂವತ್ತನೇ ವರ್ಷಕ್ಕೆ ಸಂಬಂಧಿಸಿದ ಒಂದು ಶಾಸನವು ಆತನ ರಾಣಿಯು ಆಲಯದ ಜೀರ್ಣೋದ್ಧಾರಕ್ಕೆಂದೂ, ತಾನು ಗೋವಿಂದ ರಾಜನಿಗೆ ನೀಡಿದಂತಹ ರಥದ ಅಲಂಕಾರ ಕ್ಕೆಂದೂ, ಆಣಿ ಮಾಸದ ಉತ್ಸವಕ್ಕೆಂದೂ - ದತ್ತಿ ಬಿಟ್ಟಿದ್ದನ್ನು ಹೇಳುತ್ತದೆ. (I-86) ಕ್ರಿ.ಶ. 1308 ರ ಮತ್ತೊಂದು ಶಾಸನವು ಕೈಶಿಕ ದ್ವಾದಶಿ, ಮಾರ್ಗಳಿ ದ್ವಾದಶಿ, ಮಕರ ಸಂಕ್ರಮಣ, ಚಿತ್ತ - ವಿಷುಗಳಂದು ತಿರುಮಂಜನಕ್ಕೆ ಏರ್ಪಾಡು ಮಾಡುತ್ತದೆ (I-98).

ತೊಂಡಮಂಡಲ ಪ್ರಾಂತ್ಯದಲ್ಲಿ ವಿಜಯನಗರದ ಆಡಳಿತವುಂಟಾದ ಮೇಲೆ ಗೋವಿಂದರಾಜಸ್ವಾಮಿಯ ಆಲಯವು ಹೆಚ್ಚಿನ ರಾಜಾಶ್ರಯವನ್ನು ಗಮನವನ್ನು ಪಡೆಯುವಂತಾಯಿತು.

ಕ್ರಿ.ಶ. 1445 ರ ಒಂದು ದಾಖಲೆಯು ಉತ್ತರಾ ನಕ್ಷತ್ರದ ದಿನವಂದು ದೇವರಿಗೆಂದು ಮಾಡಲಾದ ನಿವೇದನೆಯನ್ನು ಹೆಸರಿಸುವುದು (I-212). ಅದೇ ವರ್ಷದ ಮತ್ತೊಂದು ಶಾಸನವು ಆಲಯದಲ್ಲಿ ಅಂದು ನಡೆಯುತ್ತಿದ್ದ ಎರಡು ತಿರುಕ್ಕೊಡಿ ತಿರುನಾಳ್ ಉತ್ಸವಗಳನ್ನು ಹೆಸರಿಸುತ್ತದೆ (I-215). ಅದೇ ವರ್ಷದ ಇನ್ನೊಂದು ದಾಖಲೆಯಲ್ಲಿ ಕೈಯರ್ ಚಕ್ರದಿನವನ್ನು (ಸುದರ್ಶನ ಚಕ್ರವನ್ನು ಕೈಯರ್ ಚಕ್ರವೆನ್ನುವರು) ಗುರುತಿಸುತ್ತದೆ (I-222).

ಸಾಳುವ ವಂಶದವರ ಶಾಸನಗಳಿಂದಲೂ ಈ ಆಲಯದ ಬಗ್ಗೆ ಆಸಕ್ತಿಕರವಾದ ಅಂಶಗಳು ತಿಳಿದು ಬರುತ್ತವೆ. ಕ್ರಿ.ಶ. 1456 ನೇ ವರ್ಷದ ಒಂದು ಶಾಸನವು (II-3) ತೈಮಾಸದ ಪಡಿಯ ವೇಟ್ಟೈ - ಬೇಟೆ ಉತ್ಸವದ ಎರಡನೆಯ ದಿನವನ್ನು ಗುರುತಿಸುತ್ತದೆ. ಇನ್ನೊಂದು ಶಾಸನವು (II-29) ರಾಮಾನುಜರು ವ್ಯವಸ್ಥೆ ಮಾಡಿದಂತೆಯೇ ಪುಷ್ಕರಿಣಿಯಿಂದ ನೀರು ತಂದು ಗೋವಿಂದ ರಾಜ ಶ್ರೀದೇವಿ ಭೂದೇವಿಯರಿಗೆ ತಿರುಮಂಜನಕ್ಕೆ (ಸ್ನಾನಕ್ಕೆ) ಏರ್ಪಡಿಸಿದ್ದಂತೆ ತಿಳಿಸುವುದು. ಮತ್ತೊಂದು ಶಾಸನದ ಪ್ರಕಾರ (I-62) ಕಾರ್ತೀಕ ಮಾಸದ ಕೃತ್ತಿಕಾ ನಕ್ಷತ್ರದ ದಿನದಂದು ಗೋವಿಂದರಾಜಸ್ವಾಮಿ ತಿರುಮಂಜನಕ್ಕೆ ತಿರುಮಲೆ ಶ್ರೀ ವೆಂಕಟೇಶ್ವರ ಸ್ವಾಮಿ ಸನ್ನಿಧಿಯಿಂದ ಎಣ್ಣೆ ಮತ್ತು ತಾಂಬೂಲವನ್ನು ತಂದು ಒಪ್ಪಿಸಲಾಗುತ್ತಿದ್ದಿತು. ಗೋವಿಂದರಾಜ ಸ್ವಾಮಿ ಆಲಯದ ಪ್ರದೇಶದಲ್ಲಿ ಒಬ್ಬಾನೊಬ್ಬ ವಣ್‌ಶಠ ಗೋಪಜೀಯರ್ ಎಂಬುವವರು ವಸಂತ ಮಂಟಪವನ್ನು ನಿರ್ಮಿಸಿದರು. ಆದರೆ ಅದಕ್ಕೆ ಮೇಲು ಚಾವಣಿಯಿರಲಿಲ್ಲ. ವೈಕಾಸಿ ಉತ್ಸವದ ಹನ್ನೆರಡು ದಿನಗಳಲ್ಲಿ ಒಬ್ಬಾನೊಬ್ಬ ನಲ್ಲಾರ್‌ರಂಗನ್ ದೇವನು ಈ ಕೆಲಸವನ್ನು ಪೂರ್ಣಗೊಳಿಸಿದನು(II-83). ಬೇಸಿಗೆಯ ದಿನಗಳಲ್ಲಿ ಇಪ್ಪತ್ತು ದಿನಗಳ ಕೊಡಿ ತಿರುನಾಳ್ ಎಂಬುವುದು ನಡೆಯುತ್ತಿತ್ತು (II-83). ಕ್ರಿ.ಶ. 1490 ರ ಒಂದು ಶಾಸನದ ಪ್ರಕಾರ ಸಂಕ್ರಮಣ ದಿನದಂದು ಹಾಗೂ ಕನುಪ್ಪಡಿ ಉತ್ಸವದಂದು ಗೋವಿಂದರಾಜಸ್ವಾಮಿಯ ಊರ ಮೆರವಣಿಗೆ ನಡೆಯುತ್ತಿದ್ದಿತು (II-91). ನಂತರದ ವರ್ಷದ ಒಂದು ಶಾಸನ ಉಗಾದಿ ಹಾಗೂ ದೀಪಾವಳಿಗಳಂದು ದೇವರಿಗೆ ಸೂರ್ಯ ಚಂದ್ರ ಹಾರಗಳಿಂದ ಅಲಂಕಾರ ಮಾಡ ಲಾಗುತ್ತಿದ್ದಿತೆಂದು ತಿಳಿದು ಬರುತ್ತದೆ (II-91). ಇನ್ನೊಂದು ಶಾಸನದಲ್ಲಿ ಸ್ವಾಮಿಯನ್ನು ವೈಕಾಸಿ ಉತ್ಸವದಲ್ಲಿ ರಾಮಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿ ತಿರುಮಂಜನ ಮಾಡಿಕೊಂಡು ಬರುತ್ತಿದ್ದಂತೆಯೂ ಆಣಿಮಾಸದ ಉತ್ಸವದಲ್ಲಿ ಶೇಷ ವಾಹನದಲ್ಲಿ ಸ್ವಾಮಿ ಹೊರ ಬರುತ್ತಿದ್ದನೆಂದೂ ತಿಳಿಯುತ್ತದೆ (II-111). ಕ್ರಿ.ಶ. 1492 ರ ಒಂದು ಶಾಸನವು ತಿರುಪ್ಪಳ್ಳಿಯೆಳುಚ್ಚಿ ಅಥವಾ ಧನುರ್ಮಾಸದ ಉತ್ಸವವನ್ನು ಹೆಸರಿಸುವುದು (II-100). ಮಾರನೆಯ ವರ್ಷದ ಒಂದು ದಾಖಲೆಯಲ್ಲಿ ಗೋವಿಂದರಾಜನು ಆಡಿ ಆಯನದ ಒಂದು ದಿನ ಹೊಸ ಲೆಕ್ಕಗಳನ್ನು ಆರಂಭಿಸುವುದನ್ನು ಕೇಳುವನೆಂದೂ, ಉರಿ - ಅಡಿ, ಉರಿ-ಕಟ್ಟು ಉತ್ಸವಗಳನ್ನೂ ಹೇಳಲಾಗಿದೆ (II-118). ಇನ್ನೊಂದು ಶಾಸನವು (II-116). ತೈ ಅಮಾವಾಸ್ಯೆಯ ದಿನದಂದು ಗೋವಿಂದ ರಾಜನು ಅಶ್ವವಾಹನನಾಗಿ ಹೊರಬರುವುದನ್ನು ಹೇಳುತ್ತದೆ. ಕ್ರಿ.ಶ. 1494 ರ ಹೊತ್ತಿಗೆ (II-122) ಗೋವಿಂದರಾಜ ಸ್ವಾಮಿಯು ತಿರುಮಂಗೈ ಆಳ್ವಾರ್ ಗುಡಿಗೆ ಉತ್ಸವದ ಏಳನೆಯ ದಿನ ಆಗಮಿಸಿ ತಿರುವಾಯ್‌ಮೊಳಿಯನ್ನು ಆಲಿಸುತ್ತಿದ್ದದ್ದು ಪರಂಪರೆಯಾಗಿ ಕಂಡು ಬರುತ್ತದೆ. ಇನ್ನೊಂದು ಶಾಸನವು (II-140) ಹೇಳುವಂತೆ ಶ್ರೀ ವೆಂಕಟೇಶ್ವರ ಸ್ವಾಮಿಗೆ ಸಮರ್ಪಿಸಿದ ಕಾಣಿಕೆಗಳನ್ನು ತಿರುಮಲೆಯಿಂದ ತಿರುಪತಿಗೆ ತೆಗೆದುಕೊಂಡು ಬರುವ ಹೊತ್ತಿಗೆ

ಅವುಗಳ ಸ್ವಾಗತಕ್ಕೆಂದು ಗೋವಿಂದರಾಜನೂ ಚೂಡಿಕೊಡುತ್ತ ನಾಚ್ಚಿಯಾರರೂ ಹೊರ ಬರುತ್ತಿದ್ದರೆಂದು ಹೇಳುತ್ತವೆ.

ವಿಜಯನಗರದ ಸಾಳುವ ವಂಶದವರ ಕಾಲಕ್ಕೆ ಗೋವಿಂದರಾಜಸ್ವಾಮಿ ಆಲಯಕ್ಕೆ ಹೆಚ್ಚಿನ ಪ್ರಾಧಾನ್ಯದ ಆಶ್ರಯ ದೊರೆಯಿತು. ಕ್ರಿ.ಶ. 1506 ರಲ್ಲಿ ಅಪ್ಪಾ ಪಿಳ್ಳೆ ಎನ್ನುವವನು ಅಡುಗೆ ಮನೆಯ ಮುಂದೆ ಒಂದು ಮಂಟಪವನ್ನು ನಿರ್ಮಿಸಿದನು. ಕ್ರಿ.ಶ. 1507 ರ ಹೊತ್ತಿಗೆ ತಿರುವಾಳಿ ಆಳ್ವಾನ್ ಅಥವಾ ಸುದರ್ಶನ ಚಕ್ರಕ್ಕೆ ಆಲಯದ ದೊಡ್ಡ ಗೋಪುರದಲ್ಲಿ ನಿವೇದನೆ ನೀಡುವ ಪರಿಪಾಟಿ ಯುಂಟಾಯಿತು. ನರಸಿಂಹ ಮಹಾರಾಯನಿಗೆ ಪುಣ್ಯವಾಗಲಿ ಎಂದು ಕ್ರಿ.ಶ. 1508 ರಲ್ಲಿ ಈ ಗುಡಿಯಲ್ಲಿ ಅನ್ನಾ ಊಂಜಲ್ ತಿರುನಾಳ್ (ಉಯ್ಯಾಲೋತ್ಸವ) ಅನ್ನು ಆರಂಭಿಸ ಲಾಯಿತು (III-13). ಮಾಸಿ ಮಖ ಉತ್ಸವದ ಹೊತ್ತಿನಲ್ಲಿ ಗೋವಿಂದರಾಜಸ್ವಾಮಿ ತಿರುಚಾನೂರಿನ ಕೊಳಕ್ಕೆ ಹೋಗಿ ಬರುತ್ತಿದ್ದಂತೆ (III-33) ಕ್ರಿ.ಶ. 1513 ರ ಶಾಸನವು ತಿಳಿಸುತ್ತದೆ. ಇದೇ ವರ್ಷದ ಇನ್ನೊಂದು ಶಾಸನವು (IV-12) ಗೋವಿಂದರಾಜಸ್ವಾಮಿಯ ತಿರುಕ್ಕೋನೇರಿ ಯನ್ನು - ಗೋವಿಂದ ಪುಷ್ಕರಿಣಿಯನ್ನು ಹೆಸರಿಸುತ್ತದೆ. ವೈಕಾಸಿ ಮಾಸದ 28 ನೆಯ ದಿನ, ಹಾಗೂ ಆಣಿ ಮಾಸದ ಬ್ರಹ್ಮೋತ್ಸವಗಳಲ್ಲಿ ಉತ್ತರದ ತೇರು ಬೀದಿಯ ಪೂರ್ವದ ಮೂಲೆಯಲ್ಲಿ (ಈಶಾನ್ಯದಲ್ಲಿ) ಗೋವಿಂದರಾಜ ಸ್ವಾಮಿಯ ಮುಂದೆ ಮಲ್ಲೆಪ್ಪುನರ್ತನ ನಡೆಯುವ ರೂಢಿ ಯುಂಟಾಯಿತು. ಜೊತೆಗೇ ಮಾರ್ಗಳಿ ಮಾಸದಲ್ಲಿ ಚೂಡಿಕೊಡುತ್ತ ನಾಚ್ಚಿಯಾ ರಮ್ಮನಿಗೆ (ಗೋದಾದೇವಿ) ನೀರಾಟ್ಟೋತ್ಸವ ಆರಂಭವಾಯಿತು. (IV-27) ವೈಕಾಸಿ ಹಾಗೂ ಆಣಿ ಬ್ರಹ್ಮೋತ್ಸವಗಳ ಒಂಭತ್ತನೆಯ ದಿನಗಳಲ್ಲಿ ಗೋವಿಂದರಾಜಸ್ವಾಮಿಯು ಆಳ್ವಾರ್ ತೀರ್ಥಕ್ಕೆ ಆಗಮಿಸುತ್ತಿದ್ದನೆಂದು ಅದೇ ವರ್ಷದ ಇನ್ನೊಂದು ಶಾಸನವು ಸೂಚಿಸುತ್ತದೆ. (IV-76) ಇನ್ನೊಂದು ಶಾಸನವು ದೇವರು ಚಿತ್ರಕೂಟ ಮಂಟಪದಲ್ಲಿ ಕುಳಿತಿರುವಾಗ ರಥಸಪ್ತಮಿ ಉತ್ಸವವು ನಡೆಯುತ್ತಿದ್ದಿತೆಂದು ಹೇಳುವುದು (IV-118). ಸಾಳುವ ಗೋವಿಂದಯ್ಯ ನೇಂಬುವವನು ಸ್ವಾಮಿಗೆ ತೆಪ್ಪೋತ್ಸವವನ್ನು ಕ್ರಿ.ಶ. 1539 ರಲ್ಲಿ ಆರಂಭಿಸಿದನು (IV-133). ಇದೇ ವರ್ಷದ ಇನ್ನೊಂದು ಶಾಸನವು, ಗಜೇಂದ್ರ ಮೋಕ್ಷ ಉತ್ಸವವನ್ನು ಆ ಉತ್ಸವದಲ್ಲಿ ಪಾರಾಯಣ ಮಾಡುತ್ತಿದ್ದ ಗಜೇಂದ್ರ ಮೋಕ್ಷದ ಕಥೆಯನ್ನೂ ಹೆಸರಿಸುವುದು (IV-135). ಕ್ರಿ.ಶ. 1544 ರಲ್ಲಿ ಅಳಿಯ ರಾಮರಾಯನ ಆಳ್ವಿಕೆಯ ಕಾಲದಲ್ಲಿ 'ತಿರುವೆಂಕಟ ಮಹಾತ್ಮೆ'ಯನ್ನು ಇಲ್ಲಿನ ಲಕ್ಷ್ಮೀದೇವಿ ಮಂಟಪದಲ್ಲಿ ಓದಲಾಗುತ್ತಿತ್ತು (V-92). ಆಲಯದಲ್ಲಿ ಕೈಶಿಕ ಪುರಾಣವನ್ನು ಓದಲಾಗುತ್ತಿದ್ದಿತೆಂದು ಒಂದು ದಾಖಲೆಯು ಹೇಳುತ್ತದೆ (V-10). ಕ್ರಿ.ಶ. 1545 ರ ಇನ್ನೊಂದು ಶಾಸನವು ಒಂದು ಆಸಕ್ತಿ ಕಾರಕ ವಿಷಯವನ್ನು ತಿಳಿಸುತ್ತದೆ. ಅದರಂತೆ ದಿನಕ್ಕೆ ಒಂದರಂತೆ ಆಲಯದಲ್ಲಿ ಸ್ವಾಮಿಗೆಂದು ಬಳಸಲು 365 ಯಜ್ಞೋಪವೀತಗಳನ್ನು ನೀಡಲಾಯಿತು (V-47). ಚಿತ್ತಿರೈ ತಿಂಗಳಿನಲ್ಲಿ ಗೋವಿಂದರಾಜಸ್ವಾಮಿಗೆ ಐದು ದಿನಗಳು ನಡೆಯತಕ್ಕ ಕಲ್ಯಾಣೋತ್ಸವವನ್ನು ತಾಳ್ಳಪಾಕ ಚಿನ್ನ ತಿರುಮಲಯ್ಯಂಗಾರ್ಯನು ಕ್ರಿ.ಶ. 1547 ರಲ್ಲಿ ಆರಂಭಿಸಿದನು (V-153). ಎರಡು ವರ್ಷದ ನಂತರ ಆಲಯದ ಮುಖ ಮಂಟಪದ ದ್ವಾರದ ಎರಡೂ ಕಡೆಗಳಲ್ಲಿ ನಿಲ್ಲುವಂತೆ ದ್ವಾರಪಾಲಕ ವಿಗ್ರಹಗಳನ್ನು ಕ್ರಿ.ಶ. 1549 ರಲ್ಲಿ ನಂದ್ಯಾಲ ನಾರಪ್ಪಯ್ಯನು ಪ್ರತಿಷ್ಠಾಪಿಸಿದನು (V-122). ಆಲಯದಲ್ಲಿ ಕೈಯರ್ ಚಕ್ರ ಶ್ಲೋಕ - ಸುದರ್ಶನ ಚಕ್ರ ಶ್ಲೋಕ (ತಿಪ್ಪೂರ್ ಪಿಳ್ಳೈ ಅಯ್ಯಂಗಾರ್ ಬರೆದ ರಚನೆ)ವನ್ನು ಪಠಿಸುತ್ತಿದ್ದ ರೆಂದು ಕ್ರಿ.ಶ. 1554 ರ ಒಂದು ಶಾಸನವು ತಿಳಿಸುತ್ತದೆ.

ಅರವೀಡು ವಂಶದ ಆಡಳಿತ ಕಾಲದಲ್ಲಿ ಮತ್ತೂ ಹಲವು ಉತ್ಸವಗಳು ಉಂಟಾದವೆಂದು ತಿಳಿದುಬರುತ್ತದೆ. ಕ್ರಿ.ಶ. 1584 ರ ಒಂದು ಶಾಸನವು ಅವಿಲಾಲಿ ಉದ್ಯಾನವನದ ಉತ್ಸವ (ತೋಟೋತ್ಸವ)ವನ್ನು ಕುರಿತು ಹೇಳುವುದು (VI-6). ಕ್ರಿ.ಶ. 1592 ರ ಶಾಸನವೊಂದು ಮುಕ್ಕೋಟಿ ದ್ವಾದಶಿಯ ದಿನ ನಡೆಸಲಾದ ತಿರುಪ್ಪುವಿಳ ಉತ್ಸವವನ್ನು, ತುಲಸೀ ಮಹಾತ್ಮೆ ಉತ್ಸವವನ್ನು ಕುರಿತಾಡುವುದು (VI-9). ಈ ಕಾಲದ ಅತಿ ಪ್ರಮುಖ ಸಾಮಂತರಾಜ ಮಟ್ಲಕುಮಾರನು ಒಂದು ಗಜವಾಹನವನ್ನು ಒಂದು ತುರಗ ವಾಹನವನ್ನು (VI-9) ಸಮರ್ಪಣೆ ಮಾಡಿದನು ಎಂದು ಒಂದು ಶಾಸನವು ತಿಳಿಸುವುದು. (VI-25, 26)





ಗೋವಿಂದರಾಜಸ್ವಾಮಿ ಆಲಯದ ಅತಿಹೊರಗಿನ ಹಾಗೂ ಅತಿ ಹಿರಿಯ ಗೋಪುರವನ್ನು ಈತನು ನಿರ್ಮಿಸಿದನು.

**ಆಲಯದ ವಿಶಿಷ್ಟ ಲಕ್ಷಣಗಳು :** ಇಲ್ಲಿನ ಆಲಯಕೇಂದ್ರದಲ್ಲಿ ಒಂದಲ್ಲದೆ ಎರಡು ಕೋಣೆಗಳಿವೆ. ಇವೆರಡೂ ಕೋಣೆಗಳೂ ಒಂದು ಹೊರಗೋಡೆಯಿಂದ ಆವೃತವಾಗಿವೆ. ದಕ್ಷಿಣಕ್ಕೆ ಇರುವ ಗುಡಿಯು ಪಾರ್ಥಸಾರಥಿ ಎಂದು ಕರೆಯಲಾಗುವ ಕೃಷ್ಣಸ್ವಾಮಿಗೆ ಸಂಬಂಧಿಸಿದ್ದು. ಉತ್ತರದ ಕಡೆಯ ಗುಡಿಯು ಗೋವಿಂದರಾಜ ಸ್ವಾಮಿಯದು. ಒಳಗಿನ ವಿಗ್ರಹಕ್ಕೆ ಯಾವುದೋ ಕೇಡು ಉಂಟಾಯಿತೆಂದು ಕೃಷ್ಣನ (ಪಾರ್ಥ ಸಾರಥಿಯ) ಗುಡಿಯ ಪೂಜಾದಿಗಳು ನಿಂತು ಹೋದವು. ಈ ಗುಡಿಯ ಬಗ್ಗೆ ಹದಿನಾರನೆಯ ಶತಮಾನದ ಶಾಸನಗಳಲ್ಲಿ ಉಲ್ಲೇಖವಿದೆಯಾಗಿ ಇದನ್ನು ಆನಂತರದ ಕಾಲದಲ್ಲಿ ಮುಚ್ಚಿರಬೇಕು. ಇಲ್ಲಿಯ ಗೋಪುರಗಳ ಸ್ಥಾನಗಳು ವಿಶಿಷ್ಟವಾಗಿವೆ. ಅವೆಲ್ಲವೂ ಗೋವಿಂದರಾಜ ಸ್ವಾಮಿಯನ್ನಲ್ಲದೆ ಕೃಷ್ಣಸ್ವಾಮಿಯತ್ತ ಮುಖ ಮಾಡಿವೆ. ಅತಿ ಒಳಗಡೆಯ ಗೋಪುರವನ್ನು ಹದಿಮೂರನೆಯ ಶತಮಾನದಲ್ಲಿ ನಿರ್ಮಿಸ ಲಾಯಿತು. ಮಧ್ಯಗೋಪುರವನ್ನು ಹದಿನೈದನೆಯ ಶತಮಾನ ದಲ್ಲಿಯೂ ಹೊರಗಡೆಯ ಗೋಪುರವನ್ನು ಹದಿನೇಳನೆಯ ಶತಮಾನ ದಲ್ಲಿಯೂ ನಿರ್ಮಿಸಲಾಗಿದೆ. ಗೋವಿಂದರಾಜ ಸ್ವಾಮಿಯ ಆಲಯವು ಕ್ರಿ.ಶ. 1130 ರಲ್ಲಿ ರಾಮಾನುಜ ನಿರ್ಮಿತವೆಂದು ಹೇಳಲಾಗಿದೆ. ಎಂದರೆ ಅತಿ ಒಳಗಿನ ಗೋಪುರದ ನಿರ್ಮಾಣಕ್ಕೆ ಒಂದು ಶತಮಾನ ಮೊದಲು ಎಂಬುದು. ಆದರೂ ಈ ಗೋಪುರವನ್ನು ಗೋವಿಂದರಾಜಸ್ವಾಮಿ ಆಲಯಕ್ಕೆ ಎದುರಾಗಿ ನಿಲ್ಲಿಸದೆ ಕೃಷ್ಣಸ್ವಾಮಿ ಆಲಯಕ್ಕೆ ಎದುರಾಗಿ ನಿರ್ಮಿಸಲಾಗಿದೆ. ಆಲಯದ ಮೂರೂ ಕಡೆಯೂ ರಥ ಬೀದಿಗಳನ್ನು ಗೋವಿಂದರಾಜ ಸ್ವಾಮಿ ಆಲಯದ ನಿರ್ಮಾಣದ ನಂತರವೇ ನಿರ್ಮಿಸಲಾಯಿತೇ ಹೊರತು ಮೊದಲಲ್ಲ. ಶ್ರೀಕೃಷ್ಣಸ್ವಾಮಿ ಆಲಯವು ಗೋವಿಂದರಾಜ ಸ್ವಾಮಿ ಆಲಯಕ್ಕಿಂತ ಪೂರ್ವದಲ್ಲಿಯೇ ನಿರ್ಮಾಣವಾಗಿರಬೇಕು. ಈ ಆಲಯದಲ್ಲಿ ಕಂಡು ಬರುವ ಮತ್ತೊಂದು ವೈಶಿಷ್ಟ್ಯವೆಂದರೆ ಇಲ್ಲಿ ಸಂಯೋಜಿತವಾಗಿರುವ ವಿವಿಧ ಶೈಲಿಗಳು ಎನ್ನಬೇಕು. ಗೋವಿಂದರಾಜಸ್ವಾಮಿ ಆಲಯದ ಗರ್ಭಗೃಹ, ಅಂತರಾಳ, ಬಯಲು ಮುಖ ಮಂಟಪಗಳ ಕಂಬಗಳು ಚೋಳರ ಕಾಲದವೆಂಬಂತಿವೆಯಾದರೆ, ಈ ನಿರ್ಮಾಣ ಗಳೆಲ್ಲ ನಂತರದ ಕಾಲದವುಗಳಾಗಿವೆ. ಮುಖಮಂಟಪದ ಮುಂದಿರುವ ಬಯಲು ಮಂಟಪದಲ್ಲಿನ ಹಿಂದಿನ ಎರಡು ಸಾಲು ಕಂಬಗಳು ಚೋಳರ ಕಾಲವುಗಳಾದರೆ ಮುಂದಿನ ಸಾಲು ಕಂಬಗಳು ವಿಜಯನಗರ ಶೈಲಿಯಲ್ಲಿವೆ. ಇಲ್ಲಿನ ವಾಹನ ಮಂಟಪವೂ, ಶಾಲೈ ನಾಚ್ಚಿಯಾರ್ ಮಂಟಪವೂ ವಿಭಿನ್ನ ಶೈಲಿಯ ಕಂಬಗಳನ್ನು ಹೊಂದಿವೆ. ಬಲಿಪೀಠ, ಧ್ವಜಸ್ತಂಭಗಳು ಗೋವಿಂದರಾಜಸ್ವಾಮಿ ಆಲಯದ ಮುಂದೆ ಇವೆ. (ಸಶೇಷ)

## ತಿರುಮಲೆಯಲ್ಲಿ ವಸತಿ ಕಾಯ್ದಿರಿಸುವಿಕೆ

ತಿರುಮಲೆಯಲ್ಲಿನ ವಸತಿಯನ್ನು ಮುಂಗಡ ಕಾಯ್ದಿರಿಸುವ ಬಗ್ಗೆ ತಮಗೆ ಮಾಹಿತಿ ದೊರೆಯವುದು ಕಷ್ಟವಾಗಿದೆಯೆಂದು ಹಲವು ಮಂದಿ ಯಾತ್ರಿಕರು ತಿಳಿಸಿದ್ದಾರೆ. ಯಾತ್ರಿಕರಿಗೆ ವಸತಿಯ ರಿಸರ್ವೇಷನ್ ಬಗ್ಗೆ ಸೂಕ್ತವಾದ ಮಾರ್ಗದರ್ಶನ ನೀಡಲು ಕೆಳಕಂಡ ಅಂಶಗಳನ್ನು ಗಮನಿಸಬೇಕೆಂದು ಕೋರಲಾಗಿದೆ.

1. ತಿರುಮಲೆಯ ಕೇಂದ್ರಸ್ವಾಗತ ಕಚೇರಿಯ ಎ.ಆರ್.ಪಿ. ಕೌಂಟರಿನ ಬಳಿಯ ನೋಟೀಸು ಬೋರ್ಡಿನಲ್ಲಿ ಆಯಾ ದಿನದ ರಿಸರ್ವೇಷನ್ ಸಮಾಚಾರದ ವಿವರವನ್ನು ನೀಡಲಾಗುತ್ತದೆ. ಈ ವಿವರ ಪತ್ರದಲ್ಲಿ ಯಾತ್ರಿಕರು ತಮ್ಮ ಹೆಸರು ಇದೆಯೋ ಇಲ್ಲವೊ ನೋಡಿ ತಿಳಿಯಬಹುದು. ಇತರ ಯಾವುದೇ ಸೇವೆ, ಪೂಜೆಗಳ ಬಗ್ಗೆ ಅಧಿಕ ವಿವರಗಳಿಗಾಗಿ ಯಾತ್ರಿಕರು ''ಮೇ ಐ ಹೆಲ್ಪ್ ಯು'' ಕೌಂಟರ್‌ಗಳಲ್ಲಿ ವಿಚಾರಿಸಬಹುದು.
2. ತಿರುಮಲೆಯ ಸ್ವಾಗತ ಕಚೇರಿಯ ಎ.ಇ.ಓ. ಅವರಿಂದ ಯಾತ್ರಿಕರು ತಮ್ಮ ವಸತಿಯ ರಿಸರ್ವೇಷನ್ನಿನ ಪ್ರತ್ಯುತ್ತರವಾಗಲೀ, ಖಚಿತ ಮಾಹಿತಿಯಾಗಲೀ ಪಡೆಯದಿದ್ದಲ್ಲಿ, ಅವರು ತಿರುಮಲೆಯ ದೂರವಾಣಿ 77681 ನಂಬರಿಗೆ ಯಾವುದೇ ಕೆಲಸದ ದಿನದ (ರಜೆಯ ದಿನಗಳ ಹೊರತು) ಬೆಳಗ್ಗೆ 11-00 ರಿಂದ ಸಂಜೆ 5-00 ವರೆಗೂ, 70928 ನಂಬರಿನ ದೂರವಾಣಿಗೆ ಯಾವುದೇ ಹೊತ್ತಿನಲ್ಲಿಯೂ ಫೋನ್ ಮಾಡಿ ತಮ್ಮ ಡಿ. ಡಿ. ಯ / ಎಂ.ಓ. ವಿವರಗಳನ್ನು ನೀಡಿ ಸರಿಯಾದ ಉತ್ತರ ಪಡೆಯಬಹುದು.
3. ಸೇವೆಯ ಟಿಕೆಟ್‌ಗಳಿಗೆ, ವಸತಿ ಕಾಯ್ದಿರಿಸುವುದಕ್ಕೆ ಬೇರೆ ಬೇರೆ ಡಿ.ಡಿ.ಗಳನ್ನು ಕಳುಹಿಸಬೇಕು. ಸೇವೆಗಳಿಗಾಗಿ ಮೂರು ತಿಂಗಳ ಮೊದಲು ಡಿ.ಡಿ.ಯನ್ನು - ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಸೇವೆಗಳ ಬಗ್ಗೆ ವಿವರಗಳಿಗಾಗಿ ಯಾತ್ರಿಕರು ತಿರುಮಲೆಯ 79277 ದೂರವಾಣಿ ನಂಬರಿಗೆ ಫೋನ್ ಮಾಡಿ ಆರ್ಜಿತಸೇವೆ ವಿಭಾಗದಲ್ಲಿ ವಿಚಾರಿಸಬಹುದು.
4. ವಸತಿ ಕಾಯ್ದಿರಿಸುವುದರ ಬಗ್ಗೆ ಮಾಹಿತಿ ನೀಡಲು, ಮುಂಗಡ ಕಾಯ್ದಿರಿಸುವ ಕೌಂಟರಿನಲ್ಲಿ ಈ ಮಾಹಿತಿಯನ್ನು ನೀಡಲೆಂದೇ ಒಂದು ಪ್ರತ್ಯೇಕ ಕಂಪ್ಯೂಟರ್ ಏರ್ಪಡಿಸಿದ್ದು, ತಿ.ತಿ.ದೇ. ಕೇಂದ್ರ ಸ್ವಾಗತ ಕಚೇರಿಯಲ್ಲಿನ ಪ್ರಧಾನ ಕಂಪ್ಯೂಟರ್ ಸೆಲ್‌ನಲ್ಲಿಯೂ ಯಾತ್ರಿಕರಿಗೆ ವಿವರವಾದ ಮಾಹಿತಿ ದೊರೆಯುವುದು. ಈ ಸೌಲಭ್ಯ ದಿನದ ಎಲ್ಲ ವೇಳೆಯಲ್ಲಿಯೂ ಉಪಲಬ್ಧವಿದೆ.



# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ತಿರುಚಾನೂರು

# ಆರ್ಜಿತ ಸೇವೆಗಳು - ಉತ್ಸವಗಳು



| ಸೇವೆಗಳು | ದಿನ/ಕಾಲ | ಪ್ರವೇಶಾವಕಾಶ | ಶುಲ್ಕ |
|---|---|---|---|
| **ದೈನಂದಿನ ಸೇವೆಗಳು** | | | |
| ಸುಪ್ರಭಾತ | ಪ್ರಾ - 5-00 ಗಂ॥ | 1 | ರೂ. 10-00 |
| | ಶುಕ್ರವಾರ ಪ್ರಾ - 3-30 ಗಂ॥ | 1 | ರೂ. 10-00 |
| ಸಹಸ್ರನಾಮಾರ್ಚನೆ | ಪ್ರಾ - 5-30 ಗಂ॥ | 1 | ರೂ. 10-00 |
| | ಶುಕ್ರವಾರ ಪ್ರಾ - 3-45 ಗಂ॥ | 1 | ರೂ. 10-00 |
| ಪದ್ಮಾವತೀ ಪರಿಣಯ (ಕಲ್ಯಾಣೋತ್ಸವ) | ಪ್ರಾ - 10-30 ಗಂ॥ | 5 | ರೂ. 500-00 |
| ಊಂಜಲ್ ಸೇವೆ | ಸಂ॥ 5-00 ಗಂ॥ | 2 | ರೂ. 116-00 |
| (ಡೋಲೋತ್ಸವ) | ಶುಕ್ರವಾರ ಸಂ॥ 6-00 ಗಂ॥ | 2 | ರೂ. 116-00 |
| ಏಕಾಂತ ಸೇವೆ | ರಾತ್ರಿ 9-00 ಗಂ॥ | 1 | ರೂ. 10-00 |
| ಕುಂಕುಮಾರ್ಚನೆ | ಸರ್ವದರ್ಶನ ಸಮಯದಲ್ಲಿ | 2 | ರೂ. 200-00 |
| **ವಾಹನಸೇವೆಗಳು** | | | |
| ಗಜವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ಗರುಡವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ವಿಶೇಷ ಪ್ರವೇಶ | ಸರ್ವದರ್ಶನ ಸಮಯದಲ್ಲಿ | 1 | ರೂ. 10-00 |
| ಶೀಘ್ರ ದರ್ಶನ | ಸರ್ವದರ್ಶನ ಸಮಯದಲ್ಲಿ | 1 | ರೂ. 20-00 |
| **ವಾರ ಸೇವೆಗಳು** | | | |
| **ಅಷ್ಟದಳಪಾದ ಪದ್ಮಾರಾಧನೆ** | ಸೋಮವಾರ ಪ್ರಾ॥ 6-30 ಗಂ॥ | 5 | ರೂ. 1500-00 |
| (ಮೂಲವರಿಗೆ) (ಬಹುಮಾನ - 10 ಗ್ರಾಂನ ಬೆಳ್ಳಿಯ ಪದಕ - ಉತ್ತರೀಯ, ಕುಪ್ಪಸದ ಕಣ) | | | |
| **ತಿರುಪ್ಪಾವಡಾ** | ಗುರುವಾರ ಪ್ರಾ॥ 6-30 ಗಂ॥ | 10 | ರೂ. 3000-00 |
| ಬಹುಮಾನ - ಒಂದು ಉತ್ತರೀಯ, ಕುಪ್ಪಸದ ಕಣ, 20 ಲಾಡು, 20 ವಡೆ, 20 ಅಪ್ಪ, 20 ದೋಸೆ. | | | |
| ಅಭಿಷೇಕ (ಮೂಲವರಿಗೆ) | ಶುಕ್ರವಾರ ಪ್ರಾ॥ 6-00 ಗಂ॥ | 1 | ರೂ. 200-00 |
| ಶ್ರೀ ಲಕ್ಷ್ಮಿಪೂಜೆ | ಶುಕ್ರವಾರ ಪ್ರಾ॥ 9-00 ಗಂ॥ (ಬಹುಮಾನ - ಕುಪ್ಪಸದ ಕಣ) | 1 | ರೂ. 116-00 |
| ವಸಂತೋತ್ಸವ | ಮೇ ತಿಂಗಳಿನಲ್ಲಿ (ಸಂವತ್ಸರೋತ್ಸವ) | 2 | ರೂ. 300-00 |
| **ಶಾಶ್ವತ ಸೇವೆಗಳು :** | | | |
| ಶಾಶ್ವತ ನಿತ್ಯ ಅರ್ಚನೆ | | 1 | ರೂ. 1650-00 |
| ಶಾಶ್ವತ ಊಂಜಲ್ ಸೇವೆ | | 2 | ರೂ. 1116-00 |

ಶಾಶ್ವತ ಸೇವೆ ಮಾಡಿಸುವ ಗೃಹಸ್ಥರಿಗೆ ಅವರ ಪೂರ್ಣ ಜೀವಮಾನ ಕಾಲದಲ್ಲಿ ವರ್ಷಕ್ಕೆ ಒಮ್ಮೆ ಸೇವೆಯನ್ನು ದರ್ಶಿಸುವ ಅವಕಾಶ ನೀಡಲಾಗುವುದು

**ಪ್ರಸಾದ ನಿವೇದನೆಗಳು :**

| | | |
|---|---|---|
| ದಧ್ಯೋದನ | ರೂ. | 250-00 |
| ಪುಳಿಯೋಗರೆ | ರೂ. | 275-00 |
| ಪೊಂಗಲ್ | ರೂ. | 325-00 |
| ಸಕ್ಕರೆ ಪೊಂಗಲ್ | ರೂ. | 375-00 |
| ಶಾಕರ ಬಾತ್ | ರೂ. | 400-00 |
| ಸೀರಾ | ರೂ. | 675-00 |
| ದೋಸೆ | ರೂ. | 200-00 |

**ಸೂಚನೆ :**

ಕಲ್ಯಾಣೋತ್ಸವ, ಊಂಜಲ್‌ಸೇವೆ - ಮತ್ತಿತರ ವಾರಸೇವೆಗಳಿಗೆ ಸೇವಾ ಟಿಕೆಟ್‌ಗಳು ಲಭ್ಯವಿರುವಂತೆ ಅಡ್ವಾನ್ಸ್ ರಿಸರ್ವೇಷನ್ ಅವಕಾಶವಿದೆ. ತಿರುಪ್ಪಾವಡ ಮತ್ತಿತರ ಪ್ರಸಾದ ನಿವೇದನೆಗಳಿಗೆ ಕನಿಷ್ಠ ಒಂದು ದಿನ ಮೊದಲಿಗೇ ಶುಲ್ಕ ನೀಡಬೇಕು. ಮೇಲಿನ ಸೇವಾ ಕಾಲಗಳಲ್ಲಿ ತುಸು ವ್ಯತ್ಯಾಸವಾಗಬಹುದು.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ನಿತ್ಯ ಅನ್ನಪ್ರಸಾದ –ಯೋಜನೆ

ತಿರುಚಾನೂರು ಆಲಯವನ್ನು ಸಂದರ್ಶಿಸುವ ಯಾತ್ರಿಕರಿಗೆ ನಿರಂತರವಾಗಿ ದೇವರ ಪ್ರಸಾದ ವಿತರಣೆಯ ಉದ್ದೇಶದಿಂದ ಈ ಯೋಜನೆಯು ಆರಂಭವಾಗಿದೆ.

ಈ ಯೋಜನೆಗೆ ಕನಿಷ್ಠ ಪಕ್ಷ ರೂ. 1000-00 ನೀಡಬಹುದು. ರೂ. 1000-00 ಹಾಗೂ ಅದರ ಗುಣಕಗಳಲ್ಲಿ ಹಣವನ್ನು - ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ., ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು ಎ.ಇ.ಓ. ಶ್ರೀ ತಿರುಚಾನೂರು ಆಲಯ, ತಿರುಚಾನೂರು - ಎ.ಪಿ. ಇವರಿಗೆ ಕಳುಹಿಸಬೇಕು.

## ಭಕ್ತರಲ್ಲಿ ಒಂದು ವಿನಂತಿ

## ಶ್ರೀ ಪದ್ಮಾವತೀ ಅಮ್ಮನವರ ವಿಮಾನ ಗೋಪುರದ ಚಿನ್ನದ ಮುಲಾಮೀಕರಣ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯದ ವಿಮಾನ ಗೋಪುರವನ್ನೂ ಪ್ರಾಕಾರದೊಳಗಿನ ಗೋಡೆಗಳನ್ನೂ ಆರು **ಕೋಟಿ ರೂಪಾಯಿಗಳ ವೆಚ್ಚದಲ್ಲಿ ಚಿನ್ನದ ಮುಲಾಮುಗೊಳಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.**

**ಈ ಒಂದು ಘನವಾದ ಕೈಂಕರ್ಯದಲ್ಲಿ ಪಾಲು ಪಡೆಯ ಬಯಸುವ ಭಕ್ತಾದಿಗಳು ತಮ್ಮ ವಂತಿಗೆಯನ್ನು - ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ** - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯನ್ನು - ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಇವರಿಗೆ ಕಳುಹಿಸಿಕೊಡಬೇಕೆಂದು ವಿನಂತಿಸಲಾಗಿದೆ.

ಕಾರ್ಯನಿರ್ವಹಣಾಧಿಕಾರಿ,

ತಿ. ತಿ. ದೇ., ತಿರುಪತಿ.

Edited and Published on behalf T. T. Devasthanams by Dr. N. S. Ramamuthy and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.







ಸ್ವಾಮಿ ಬ್ರಹ್ಮೋತ್ಸವದಲ್ಲಿ ತಿರುಮಲೆಯಲ್ಲಿ ಆಂಧ್ರಪ್ರದೇಶ ಮುಖ್ಯಮಂತ್ರಿ
ಆರಂಭಿಸಿದ ಎರಡನೇ ಕಲ್ಯಾಣಕಟ್ಟೆ, ಸೋಲಾರ್ ಕುಕಿಂಗ್ ಸಿಸ್ಟಂ.